# ಪಿ. ಸುಬ್ಬರಾವ್

# P. SUBBARAO



ಕರ್ನಾಟಕ ಲಲಿತಕಲಾ ಅಕಾಡೆಮಿ KARNATAKA LALITHKALA ACADEMY



ಎಂ.ಎಸ್. ನಂಜುಂಡರಾವ್

ಕರ್ನಾಟಕದ ಅನೇಕಾನೇಕ ಉತ್ತಮ ಕಲಾವಿದರು ರಾಷ್ಟ್ರೀಯ, ಅಂತರರಾಷ್ಟ್ರೀಯ ಖ್ಯಾತಿಗಳಿಸಿದ್ದಾರೆ. ಇಂತಹ ಖ್ಯಾತಿಗೆ ಪಾತ್ರರಾಗಿರುವರಲ್ಲಿ ಕೆಲವರು ತಮ್ಮ ಸೃಜನಶೀಲ ಕೃತಿ ರಚನೆಯಿಂದ ಹೆಸರು ಪಡೆದಿದ್ದರೆ ಮಿಕ್ಕ ಕೆಲವರು ಕಲೆಯ ಶಿಕ್ಷಣ ಮತ್ತು ಅದರ ಬೆಳವಣಿಗೆಗೆ ಅವಶ್ಯಕವಾದ ಸಂಸ್ಥೆಗಳನ್ನು ಸಂಘಟಿಸುವಲ್ಲಿ ನಿರತರಾಗಿದ್ದಾರೆ. ಅಂತಹವರಲ್ಲಿ ಮೊದಲ ಪಂಕ್ತಿಗೆ ಸೇರುವವರು ಬೆಂಗಳೂರಿನ ಶ್ರೀ ಎಂ.ಎಸ್. ನಂಜುಂಡರಾವ್.

ನಂಜುಂಡರಾಯರೂ ತಮ್ಮ ಕಲಾ ವ್ಯಾಸಂಗವನ್ನು ಮೈಸೂರಿನ ಚಾಮರಾಜ ತಾಂತ್ರಿಕ ಶಾಲೆಯಲ್ಲಿ ಪಡೆದು, ಪದವಿಯನ್ನು ಗಳಿಸಿ ಕೃತಿ ರಚನೆಗೆ ತೊಡಗಿದವರು. ಇವರಿಗೆ ವಿಶೇಷ ಆಸಕ್ತಿ ಹುಟ್ಟಿದ್ದು ನಾಡಿನ ಶ್ರೇಷ್ಠಮಟ್ಟದ ಕಲಾಸಂಪತ್ತನ್ನು ಉಳಿಸಿ, ಬೆಳೆಸಲು ಅವಶ್ಯಕವಾದ ಸಂಸ್ಥೆಯೊಂದರ ಸ್ಥಾಪನೆ. ಹೀಗೆ ಜನ್ಮ ತಾಳಿದ್ದು ಕರ್ನಾಟಕ ಚಿತ್ರಕಲಾ ಪರಿಷತ್ತು ಸಂಸ್ಥೆ. ಸ್ಥಾಪನೆಯಾದ ತಾರುಣ್ಯದಲ್ಲಿಯೇ ಚಿತ್ರಕಲಾ ವಿದ್ಯಾಲಯ ಎಂಬ ಕಲಾ ಶಿಕ್ಷಣ ವಿಭಾಗದ ಪ್ರಾರಂಭ, ಅವರ ಎಡಬಿಡದ ಚಟುವಟಿಕೆ, ಛಲ ಮತ್ತು ಸಂಘಟನಾ ಶಕ್ತಿಗಳಿಂದ ಪರಿಷತ್ತು ಹೆಮ್ಮರವಾಗಿ ಬೆಳೆಯಿತು. ಕಲಾಶಾಲೆ ಪ್ರೌಢಶಾಲೆಯಾಗಿ ಪರಿವರ್ತನೆಗೊಂಡಿತು. ಪರಿಷತ್ತಿನ ಆಧುನಿಕ, ವಿಶಾಲವಾದ ಗ್ಯಾಲರಿಗಳು ಅನೇಕಾನೇಕ ಕಲಾ ಪ್ರದರ್ಶನಗಳನ್ನು ಆಕರ್ಷಿಸಿವೆ. ಅದರ ಸಂಗ್ರಹದಲ್ಲೂ ವೈವಿಧ್ಯಪೂರ್ಣ ಸಾಂಪ್ರದಾಯಿಕ ಕೃತಿಗಳು, ಬೆಲೆಬಾಳುವ ತೊಗಲುಗೊಂಬೆಗಳು, ಲೋಕವಿಖ್ಯಾತ ರೋರಿಕ್‌ರ ಚಿತ್ರಗಳೂ ಅಲ್ಲದೇ ಇತ್ತೀಚೆಗೆ ಶ್ರೀ ಹೆಚ್.ಕೆ. ಕೇಜರಿವಾಲ್‌ರವರಿಂದ ಕೊಡಲ್ಪಟ್ಟ ಬಂಗಾಲದ ಸುಪ್ರಸಿದ್ಧ ಕಲಾವಿದರ ಕೃತಿಗಳೂ ಸೇರಿವೆ. ಇದೆಲ್ಲಾ ನಂಜುಂಡರಾಯರ ಸಾಧನೆ.

ರಾಯರು ಸಮಯಸಿಕ್ಕಾಗ ಬರವಣಿಗೆಯತ್ತಲೂ ಗಮನ ಹರಿಸಿದ್ದಾರೆ. ಅವರ ನಿಕಟವರ್ತಿಗಳಾಗಿದ್ದ ಶ್ರೀ ಪಿ.ಎಸ್. ರಾಯರನ್ನು ಕುರಿತ ಈ ಕೃತಿ ಅಂತಹ ಬರವಣಿಗೆಗಳಲ್ಲೊಂದು. ಇಂತಹ ಮತ್ತೂ ಒಂದೆರಡು ರಚನೆಗಳನ್ನು ಅಕಡೆಮಿಯು ಮೂಲಕ ಎದುರು ನೋಡಬಹುದು.

ಕರ್ನಾಟಕದ ಕಲಾವಿದರು : 27

# ಪಿ. ಸುಬ್ಬರಾವ್




ಎಂ.ಎಸ್. ನಂಜುಂಡರಾವ್

ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು - 560 002

P. S. RAO
A Biography by M.S. Nanjunda Rao,
Published By K.Mukundan, *Registrar*
Karnataka Lalithakala Academy
Nrupatunga Road, Bangalore - 560 002

First impression: 1994

No. of pages : iv + 48

Copies: 1000

Price: Rs.10-00

General Editor : S.N. Chandrasekar



Printed at
*M*ayur *P*rint-*A*ds
Cottonpet Main Road
Bangalore - 56
Phone : 62 0203, 62 0303 Resi : 3353536



# ಮೊದಲ ಮಾತು

ಕರ್ನಾಟಕ ಲಲಿತಕಲಾ ಅಕಾಡಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸಿರುವುದು ಒಂದು. ಈ ಪುಸ್ತಕಗಳು ಆ ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ಬೆಳೆದು ಬಂದ ದಾರಿ ಮತ್ತು ಅವರ ಜೀವನ ಚರಿತ್ರೆಯ ತಿಳುವಳಿಕೆ ಉಂಟುಮಾಡಲು ಸಹಾಯವಾಗಬಲ್ಲದು.

ಈ ಯೋಜನೆಯಲ್ಲಿ ಈಗಾಗಲೇ ಇಪ್ಪತ್ತೇಳು ಸಚಿತ್ರ ಸುಂದರ ಹೊತ್ತಿಗೆಗಳು ಹೊರಬಂದಿದೆ. ಈಗ, ಅಂದರೆ ೧೯೯೩ - ೯೪ರ ಸಾಲಿನಲ್ಲಿ ಹಲವಾರು ಹೊತ್ತಿಗೆಗಳು ಹೊರಬಂದಿದ್ದು, ಇನ್ನೂ ಒಂದೆರಡು ಸಿದ್ಧವಾಗುತ್ತಲಿವೆ. ಈಗ ಬಿಡುಗಡೆಯಾಗುತ್ತಿರುವ ಪುಸ್ತಕ ಹಿಂದಿನ ಮತ್ತು ಇಂದಿನ ಪೀಳಿಗೆಗೆ ಹಿರಿಯರಾದ ಪಿ. ಸುಬ್ಬರಾವ್ ಅವರನ್ನು ಕುರಿತದ್ದು. ಈ ಮಾಲೆ ಅತ್ಯಂತ ಜನಪ್ರಿಯವಾಗಿದ್ದು, ಈಗಾಗಲೇ ಕೆಲವು ಪುಸ್ತಕಗಳು ಪುನರ್ ಮುದ್ರಣವಾಗಿರುವುದು ಅವುಗಳ ಅವಶ್ಯಕತೆ, ಸಾರ್ಥಕತೆಗಳ ದ್ಯೋತಕ.

ಈ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ, ಅವರ ಕಲಾ ವಿಲಾಸದ ಪ್ರತೀಕ. ಅವು ಆಯಾ ಕಲಾವಿದರ, ಆವರ ಕಾಲದ ಕಲಾ ಸಂಪತ್ತಿನ ವ್ಯಾಪ್ತಿಯನ್ನು ಅರಿಯಲು ಸಾಧಕವಾಗುವುದರಲ್ಲಿ ಸಂದೇಹವಿಲ್ಲ.

ಕಲಾವಿದರು, ಕಲಾ ರಸಿಕರು ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

**ಪಿ. ಆರ್. ತಿಪ್ಪೇಸ್ವಾಮಿ**
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡಮಿ
ಬೆಂಗಳೂರು.



# ಪಿ. ಸುಬ್ಬರಾವ್

ಕೆಲವು ಮಂದಿ ಕಲಾವಿದರು ತಮ್ಮ ಕಲಾ ಶಿಕ್ಷಣ ಕ್ರಮದ ಹಾದಿಯಲ್ಲಿ ನಡೆಯುತ್ತ, ತಮ್ಮ ಮನದಾಳದ ಅಭಿವ್ಯಕ್ತಿಯ ಆಕಾಂಕ್ಷೆಗಳನ್ನು ನಿರ್ದಿಷ್ಟ ರೂಪರೇಷೆಗಳಿಗೆ ಅನ್ವಯಿಸಿಕೊಂಡು, ವಿಶಿಷ್ಟ ಶೈಲಿಯ ಕೃತಿರಚನೆ ಮಾಡಿ ಕೃತಕೃತ್ಯರಾಗುತ್ತಾರೆ. ಇನ್ನು ಕೆಲವು ಕಲಾವಿದರು ನಿತ್ಯನೂತನ ಸೃಜನಾತ್ಮಕ ಗೀಳಿನಿಂದ ನವನವೀನ ಪ್ರಯೋಗಗಳನ್ನು ಮಾಡುತ್ತ, ಚಿತ್ರಕಲಾ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಲು ತಮ್ಮ ಬದುಕನ್ನೇ ಸಮರ್ಪಿಸಿಕೊಳ್ಳುತ್ತಾರೆ. ಆದ್ದರಿಂದಲೇ ಇಂಥವರ ಕೃತಿಗಳು ಕೇವಲ ದೃಷ್ಟಿಗೋಚರಿಕೆಯ ಕೃತಿಗಳಾಗದೆ, ಅಂತರಂಗದ ಮನೋಗೋಚರಿಕೆಯ ಗರಿಷ್ಠ ಪ್ರಮಾಣದ ಅಭಿವ್ಯಕ್ತಿಯನ್ನು ಮೆರೆಸುತ್ತವೆ.

ಈ ಎರಡು ವಿಧಾನಗಳಲ್ಲಿ ಎರಡನೆಯದು ಬಹಳ ಕ್ಲಿಷ್ಟಕರವಾದ ಮಾರ್ಗ. ಈ ಮಾರ್ಗವನ್ನು ಅನುಸರಿಸಿ, ಯಶಸ್ಸಿನ ಉತ್ತುಂಗಕ್ಕೆ ಏರುವುದು ಬಹಳ ಕಷ್ಟ. ತಮ್ಮ ಕುಂಚವನ್ನು ಇಂಥ ಕ್ಲಿಷ್ಟಕರ ಮಾರ್ಗಕ್ಕೇ ಒಪ್ಪಿಸಿಕೊಂಡು, ಪ್ರತಿದಿನವೂ ನೂತನ ಪ್ರಯೋಗಗಳನ್ನು ಮಾಡುತ್ತ, ಶ್ರೇಷ್ಠ ಕಲಾವಿದರಾಗಿ ಮೆರೆದವರಲ್ಲಿ ಶ್ರೀ ಪಿ. ಸುಬ್ಬರಾವ್

(ಪುಟ್ಟನರಸಪ್ಪ ಸುಬ್ಬರಾವ್) ಅವರು ಪ್ರಮುಖರು. ಕನ್ನಡನಾಡಿನ ಕಲಾರಂಗದಲ್ಲಿ ಪಿ. ಸುಬ್ಬರಾವ್ ಅವರ ಕೃತಿಗಳಿಗೆ ತನ್ನದೇ ಆದ ವಿಶಿಷ್ಟ ಸ್ಥಾನ ಸಲ್ಲುತ್ತದೆ. ಪ್ರಯೋಗಶೀಲತೆಯ ಉದ್ಧಾಮ ಅಭಿವ್ಯಕ್ತಿಯಿಂದ ಜೀವನ ಹಾಗೂ ಕಲೆ ಎರಡರಲ್ಲೂ ಮನೋಗೋಚರಿಕೆಯ ಉನ್ನತ ಮಟ್ಟವನ್ನು ತಲುಪುವುದರಲ್ಲಿ ಯಶಸ್ಸು ಗಳಿಸಿದರು. ಆದರೆ ತಮ್ಮ ಜೀವನವನ್ನು ಪ್ರಯೋಗ ಹಾಗೂ ಜಿಜ್ಞಾಸೆಗಳ ಜಂಜಾಟದಲ್ಲಿ ಅರ್ಧಕ್ಕೇ ಮುಕ್ತಾಯಗೊಳಿಸಬೇಕಾದ ದುರ್ಭರ ಸನ್ನಿವೇಶವನ್ನು ಅವರು ಆರಿಸಿಕೊಂಡರು. ಇದು ಯಾರಿಗಾದರೂ ನೋವುಂಟು ಮಾಡುವಂತಹ ವಿಚಾರ.

ಇವರ ಸಂಯೋಗ ಚಿತ್ರಗಳು ಸಂಘಟನೆ ಹಾಗೂ ಕಾವ್ಯಮಯ ಅಭಿವ್ಯಕ್ತಿಗೆ ಅತ್ಯಂತ ಉತ್ತಮವಾದ ನಿದರ್ಶನವಾಗಿವೆ. ಇವರ ಕೃತಿಗಳಲ್ಲಿ ಕನಿಕರ, ಸಂವೇದನೆ, ಆಕಾಂಕ್ಷೆ, ಚಿಂತನೆ ಇವುಗಳ ಪರಿಕಲ್ಪನೆ ತಾನೇ ತಾನಾಗಿ ಮೆರೆದಿವೆ. ಇವರ ಕಲೆ ವಿದ್ಯಾರ್ಥಿದೆಶೆಯ ಕಾಲದಿಂದ, ಅತ್ಯುತ್ತಮ ಪ್ರಯೋಗಮಯ ಕಾಲದವರೆಗಿನ ಚಿತ್ರಗಳನ್ನು ಅವಲೋಕಿಸಿದಾಗ ಅವರ ಮನಸ್ಸಿನ ತುಮುಲದ ಗಾಢವಾದ ಕಲ್ಪನಾ ಚತುರತೆಯನ್ನು ಬಿಂಬಿಸುತ್ತವೆ. ಅವರ ಒಂದೊಂದು ಚಿತ್ರವೂ ಒಂದೊಂದು ರಸಕಾವ್ಯವಾಗಿದೆ. ಅರ್ಥವತ್ತಾಗಿದೆ, ಸೂಕ್ಷ್ಮ ವಿಚಾರಗಳ ನಿಗೂಢತೆಯನ್ನು ಹೊಂದಿದೆ. ಪ್ರೇಕ್ಷಕನಿಗೆ ಜಿಜ್ಞಾಸೆ ಹುಟ್ಟಿಸಿ, ಚಿಂತನೆಗೊಳಪಡಿಸುವ ಗುಣಗಳನ್ನು ಅವರ ಚಿತ್ರಗಳು ಮೈಗೂಡಿಸಿಕೊಂಡಿವೆ.

ಸುಬ್ಬರಾಯರು ಕೇವಲ ಒಂದು ನೌಕರಿಗೆ ತಮ್ಮ ಜೀವನವನ್ನು ಸೀಮಿತಗೊಳಿಸಿಕೊಳ್ಳಲಿಲ್ಲ. ಕಾಲ ಕಾಲಕ್ಕೆ ತಮ್ಮ ಮನೋಕಲ್ಪನೆಗಳ ಸುಂಟರಗಾಳಿಗೆ ಸಿಲುಕಿ ಹೊಸ ಹೊಸ ನೌಕರಿ, ಸ್ಥಳ, ಕಲಾಕ್ಷೇತ್ರದ ಬೇರೆ ಬೇರೆ ಪ್ರಕಾರಗಳಿಗೆ ಮೊರೆ ಹೋಗುತ್ತಿದ್ದರು. ಕಲಾವಿದರಿಂದ ಸ್ನೇಹಮಯ ಜೀವನವನ್ನು ಬೇರೆ ಕ್ಷೇತ್ರದವರು ಬಯಸುವುದು ದುರ್ಲಭ. ಆದರೆ ಸುಬ್ಬರಾಯರು ಸಾಹಿತಿಗಳೊಡನೆ, ದಾರ್ಶನಿಕರೊಡನೆ,

ಸಮಾಜಸೇವಾಕರ್ತರೊಡನೆ ಹಾಗೂ ಕಾರ್ಮಿಕರೊಡನೆ ನಿಕಟ ಸಂಪರ್ಕ ಇಟ್ಟುಕೊಳ್ಳಲು ಹಾತೊರೆಯುತ್ತಿದ್ದರು. ಅವರ ಮನೋಸ್ಥಿತಿ ಪ್ರಬುದ್ಧಮಾನಕ್ಕೆ ಬಂದ ಮೇಲೆ ಧಾರವಾಡದಲ್ಲಿದ್ದಾಗ ದಿವಂಗತ ದ.ರಾ.ಬೇಂದ್ರೆ, ಹುಕ್ಕೇರಿಕರ್ ರಾಮರಾವ್ ಮತ್ತಿತರ ಉನ್ನತ ವ್ಯಕ್ತಿಗಳೊಡನೆ ಸದಾ ಸಂಪರ್ಕವನ್ನಿರಿಸಿಕೊಂಡಿದ್ದರು. ಇಂತಹ ಮೇಧಾವಿ ಕಲಾವಿದನ ಜೀವನ ಹಂತ ಹಂತದಲ್ಲಿ ಬದಲಾವಣೆಗಳಿಗೆ ತುತ್ತಾಗಿ ತಮ್ಮ ಅನಿಸಿಕೆಗಳನ್ನು ಚಿತ್ರಪಟದ ಮೇಲೆ ಪೂರ್ಣವಾಗಿ ಹೊರಚಿಮ್ಮುತ್ತ, ಪ್ರಯೋಗಗಳನ್ನು ಮಾಡುತ್ತಾ ಸೃಜನಾತ್ಮಕ ಕಲಾವಿದರಾಗಿ ಮೆರೆದ ಸುಬ್ಬರಾಯರು, ಕಲಾರಂಗಕ್ಕೆ ಕೊಟ್ಟ ಕೊಡುಗೆ ಅಪಾರ.

ಇವರ ಬಾಲ್ಯ ಜೀವನದ ನೆನಪುಗಳು, ಅನಾಥ ಬಾಲಕರು ಇತರೆಯವರ ದಾಕ್ಷಿಣ್ಯದಲ್ಲಿ ಬದುಕುವ ಮರ್ಮ ಜೀವನವನ್ನು ಪ್ರತಿಬಿಂಬಿಸುತ್ತವೆ. ತಂದೆ ತಾಯಿಗಳಿಂದ ಅಗಲಿಕೆಯಾದ ಐದು ವರ್ಷಗಳ ನಂತರ, ಮಧುಗಿರಿ ತಾಲ್ಲೂಕು ಸುದ್ದೆಕುಂಟೆಯಲ್ಲಿ ಇವರ ಅಕ್ಕನ ಮನೆಯಲ್ಲಿ ವಿದ್ಯಾಭ್ಯಾಸ ಮಾಡಲು ಪ್ರಾರಂಭಿಸಿದರು. ಪ್ರಾಥಮಿಕ ವಿದ್ಯಾಭ್ಯಾಸದ ನಂತರ ಇಟಕದಿಬ್ಬನ ಹಳ್ಳಿಯ ಮಾಧ್ಯಮಿಕ ಶಾಲೆಯಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಈ ಮಧ್ಯೆ ಇವರ ಭಾವಂದಿರಾದ ಭೀಮರಾವ್‌ರವರ ತಮ್ಮ ಎಂ. ಎಸ್. ದಾಸಪ್ಪನವರೊಡನೆ ಚಿತ್ರಬರೆಯುವ ಹವ್ಯಾಸದಲ್ಲಿ ತೊಡಗಿದರು. ದಾಸಪ್ಪನವರು ಹಳ್ಳಿಯ ಶಾಲಾ ಉಪಾಧ್ಯಾಯರು. ಅವರ ಕಾರ್ಯಬಾಹುಳ್ಯ ಮಾತ್ರ ಬಹಳ ಸ್ವಾರ. ದಾಸಪ್ಪನವರು ಸಂಗೀತದಲ್ಲಿ, ಸಾಹಿತ್ಯದಲ್ಲಿ, ನಾಟಕ ಕಲೆಯಲ್ಲಿ, ಚಿತ್ರಕಲೆಯಲ್ಲಿ, ಹರಿಕಥೆ ಮಾಡುವುದರಲ್ಲಿ ಸದಾ ತಮ್ಮ ವಿರಾಮ ಕಾಲವನ್ನು ವಿನಿಯೋಗಿಸುತ್ತಿದ್ದರು. ಇವರ ಮನೆ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿತ್ತು. ಇವರೊಂದಿಗೆ ಸುಬ್ಬರಾಯರು ಕೆಲವು ವರ್ಷಗಳ ಕಾಲ ಎಡೆಬಿಡದೆ ಈ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳ ಪರಿಚಯಮಾಡಿಕೊಂಡರು.

ಸುದ್ದೆಕುಂಟೆಯ ತಮ್ಮ ವಾಸ್ತವ್ಯ ಕಾಲದಲ್ಲಿ ಇವರಿಗೆ ಸಮೀಪವಿದ್ದ ಗುಡ್ಡಗಾಡುಗಳಲ್ಲಿನ ನಿಸರ್ಗದ ರಮಣೀಯತೆಯ ಪರಿಚಯ ಆಯಿತು. ಮಧುಗಿರಿ ಬೆಟ್ಟದ ಸಾಲು ಮತ್ತು ದಾಸಪ್ಪನವರ ಜೊತೆ ಸಿದ್ಧಾಪುರ, ಕುಡುವತಿ, ಮಿಡಿಗೇಶಿ, ರತ್ನಗಿರಿ ಹಾಗೂ ಹೇಮಾವತಿಗಳ ಚರಿತ್ರಾರ್ಹ ಸ್ಥಳಗಳ ಸಂದರ್ಶನ ಮತ್ತು ಅಧ್ಯಯನ ಮಾಡುವ ಅವಕಾಶ ದೊರಕಿತು. ದಾಸಪ್ಪನವರು ಸುಬ್ಬರಾಯರ ಇಂಗಿತವನ್ನು ಅರಿತು ತಮಗೆ ಪರಿಚಯವಿದ್ದ ಬೆಂಗಳೂರಿನ ಕಲಾಮಂದಿರಕ್ಕೆ ಇವರನ್ನು ಸೇರಿಸಿದರು.

ಒಮ್ಮೆ ದಾಸಪ್ಪನವರೊಡನೆ ತುಮಕೂರು ಜಿಲ್ಲೆಯ ಸಿದ್ಧರಬೆಟ್ಟಕ್ಕೆ ಹೋಗುವ ಅವಕಾಶ ದೊರಕಿತು. ಪ್ರಮುಖ ಪುರಾಣ ಕ್ಷೇತ್ರವಾದ ಸಿದ್ಧರಬೆಟ್ಟ ಅನೇಕ ಔಷಧ ಮೂಲಿಕೆಗಳ ಮೂಲ ಸ್ಥಾನ. ವರ್ಷಕ್ಕೊಮ್ಮೆ ಜಾತ್ರೆ. ಜಾತ್ರೆಯ ಸಮಯದಲ್ಲಿ ತುಂಬಿದ ಜನಜಂಗುಳಿ. ಬೆಟ್ಟದ ಮೇಲೆ ಹೋಗುವ ದಾರಿ ಬಹಳ ಕಡಿದು ಹಾಗೂ ಇಕ್ಕಟ್ಟು. ಮಧ್ಯೆ ಮೆಟ್ಟಲುಗಳ ಸಾಲುಗಳಲ್ಲಿ ಏರುತ್ತಿರುವಾಗ ಹುಡುಗ ಸುಬ್ಬರಾಯರು ಜಾರಿ ಬಂಡೆಗಳ ಮೇಲೆ ಉರುಳಿದರು. ಬಂಡೆಯ ತಳ ಸುಮಾರು 200 ಅಡಿಗಳಷ್ಟು ಕೆಳಗೆ ಇದ್ದದ್ದು ಎಲ್ಲರಿಗೂ ಆತಂಕವಾಯಿತು ಅದೃಷ್ಟವಶಾತ್ ಮಧ್ಯೆ ಇದ್ದ ಒಂದು ಸಣ್ಣ ಗಿಡಕ್ಕೆ ದೇಹ ತಾಕಿ ಹುಡುಗನ ಪ್ರಾಣ ಉಳಿಯಿತು. ಅನಾಹುತ ತಪ್ಪಿತು. ಅನಂತರ ಜೊತೆಗಿದ್ದ ಯಾತ್ರಿಕರು ಪ್ರಯಾಸದಿಂದ ಹುಡುಗನನ್ನು ಎತ್ತಿ ಮೇಲಕ್ಕೆ ತಂದರು.

ಕಲಾಮಂದಿರದಲ್ಲಿ ಕೆಲಕಾಲ ಕಲಿಕೆಯ ನಂತರ ಸುಬ್ಬರಾಯರು ಮೈಸೂರಿನ ಶ್ರೀ ಚಾಮರಾಜೇಂದ್ರ ಟೆಕ್ನಿಕಲ್ ಇನ್ಸ್‌ಟಿಟ್ಯೂಟ್‌ನಲ್ಲಿ ದಿವಂಗತ ಪಾವಂಜೆ ಹಾಗೂ ಎಸ್. ಜಿ. ಟಂಕಸಾಲೆಯವರ ಮಾರ್ಗದರ್ಶನದಲ್ಲಿ ಕಲಾಶಿಕ್ಷಣವನ್ನು ಮುಂದುವರೆಸಿದರು. ಇವರೊಂದಿಗೆ ಕಲಾವಿದರಾದ ದಿವಂಗತ ಷೌಕತ್ ಅಲಿ, ಸಿದ್ದಪ್ಪ ರುದ್ರಹಂಜಿ, ರುಮಾಲೆ ಚನ್ನಬಸವಯ್ಯ, ಎನ್. ಹನುಮಯ್ಯ, ಬಿ.ಹೆಚ್. ರಾಮಚಂದ್ರ, ಅಬ್ಬಿಗೇರಿ ಹಾಗೂ ಚನ್ನವೀರಪ್ಪನವರು ಕಲಾ

ಶಿಕ್ಷಣದಲ್ಲಿದ್ದರು. ಇವರು ಮೈಸೂರಿನಲ್ಲಿ ತಮ್ಮ ವಿದ್ಯಾಭ್ಯಾಸದ ಅವಧಿಯಲ್ಲಿ ಆಗ ಇದ್ದ ಮದ್ರಾಸ್ ಜೂನಿಯರ್ ಕಲಾ ಪರೀಕ್ಷೆಗಳಲ್ಲಿ ಪ್ರತಿವರ್ಷ ಉತ್ತೀರ್ಣರಾಗುತ್ತಿದ್ದರು. ಮೈಸೂರಿನ ಕಲಾ ವಿದ್ಯಾಭ್ಯಾಸ ಮುಗಿದ ಮೇಲೆ ಬೆಂಗಳೂರಿಗೆ ಬಂದರು. ಕಲಾಮಂದಿರದ ಮುಖೇನ ತಮ್ಮ ಉಳಿದಿದ್ದ ಮದ್ರಾಸ್‌ನ ಅಂತಿಮ ಕಲಾ ಪರೀಕ್ಷೆಯನ್ನು ಪೂರ್ಣಮಾಡಿಕೊಂಡರು.

ಒಮ್ಮೆ ಕಲಾವಿದ್ಯಾರ್ಥಿಗಳೆಲ್ಲರೂ ತಮ್ಮ ಗುರುಗಳು ಹೇಳಿಕೊಡುತ್ತಿರುವ ಪಾಠಗಳಿಗೆ ಪುಸ್ತಕಭಂಡಾರ ಸಾಲದೆಂಬ ದೂರನ್ನು ಪಾವಂಜೆಯವರ ಮುಂದೆ ಇಟ್ಟಾಗ, ಅವರು ಈ ದೂರು ತರಗತಿಯ ಉಪಾಧ್ಯಾಯರ ಮುಖಾಂತರ ಬರಲಿಲ್ಲವೆಂದು ಆಕ್ಷೇಪಿಸಿದರು. ಇದರಿಂದ ವಿದ್ಯಾರ್ಥಿಗಳೆಲ್ಲರೂ ಎರಡು ಮೂರು ದಿನ ಭಯಪಟ್ಟು ಶಾಲೆಗೆ ಬರಲಿಲ್ಲ. ಆದರೆ ಸುಬ್ಬರಾಯರು ಇತರ ಗೆಳೆಯರೊಂದಿಗೆ ಪಾವಂಜೆಯಲ್ಲಿಗೆ ಹೋಗಿ ತಪ್ಪಾಯಿತೆಂದು ಕ್ಷಮೆ ಕೇಳಿದರು. ತಕ್ಷಣ ಪಾವಂಜೆಯವರು ಉಪಾಧ್ಯಾಯರನ್ನು ಕರೆಸಿ ಹುಡುಗರನ್ನು ವಾಪಸ್ಸು ತರಗತಿಗೆ ಸೇರಿಸಿಕೊಳ್ಳಲು ಅಪ್ಪಣೆ ಇತ್ತರು. ಸುಬ್ಬರಾಯರು ಗುರುಗಳಲ್ಲಿ ತಮ್ಮ ಬಗ್ಗೆ ಒಳ್ಳೆಯ ಅಭಿಪ್ರಾಯ ಬರುವಂತೆ ಕೆಲವೇ ನಿಮಿಷಗಳಲ್ಲಿ ನಮ್ರತೆಯಿಂದ ಪ್ರಯತ್ನಿಸಿ, ಚಾಕಚಕ್ಯತೆಯಿಂದ ವಿಕೋಪಕ್ಕೆ ತಿರುಗಿದ್ದ ಪರಿಸ್ಥಿತಿಯನ್ನು ತಿಳಿಗೊಳಿಸಿದರು.

ಮೈಸೂರಿನಲ್ಲಿ ತಮ್ಮ ಸಹಪಾಠಿಗಳ ಜೊತೆ ಹರಟೆ ಮತ್ತು ಚಿಂತನೆಗಳಲ್ಲಿ ತೊಡಗಿ, ಅನೇಕರಿಗೆ ಸ್ಫೂರ್ತಿದಾಯಕರಾಗಿದ್ದರು. ಷೌಕತ್ ಅಲಿ, ರುಮಾಲೆ ಚನ್ನಬಸವಯ್ಯ, ಸಿದ್ದಪ್ಪ, ಹೆಚ್.ಎಸ್. ನಾರಾಯಣರಾವ್‌ರೊಂದಿಗೆ ಸಲುಗೆಯಿಂದ ಮಾತಾಡುವ ಅಧಿಕಾರ ಪಡೆದಿದ್ದರು. ಕೆಲವು ಕಲಾ ಗೆಳೆಯರನ್ನು ಕರೆದುಕೊಂಡು ಮೈಸೂರು ಸುತ್ತಮುತ್ತಲ ಕಲಾರಂಜಿತ ಸ್ಥಳಗಳಿಗೆ ಭೇಟಿ ಇತ್ತು, ಅಲ್ಲಿನ ದೃಶ್ಯಗಳನ್ನು ಜಲವರ್ಣದಲ್ಲಿ ಸೆರೆಹಿಡಿಯಲು ಅನೇಕ ಸಲ ಕಲಾಪ್ರವಾಸಗಳನ್ನು ಏರ್ಪಾಡು ಮಾಡಿಕೊಳ್ಳುತ್ತಿದ್ದರು. ಕೆಲವು ಸಲ ತಮ್ಮ ಗುರುಗಳೊಡನೆ

ಸೈದ್ಧಾಂತಿಕ ವಿರೋಧವನ್ನು ಕಟ್ಟಿಕೊಂಡು ನಿಷ್ಠೂರವಾದ ಸನ್ನಿವೇಶಗಳನ್ನು ಎದುರಿಸುತ್ತಿದ್ದರು.

ಕೆಲಕಾಲದ ನಂತರ, ಮಿತ್ರ ಚನ್ನವೀರಯ್ಯನವರ ಸಹಭಾಗಿತ್ವದಿಂದ ಬೆಂಗಳೂರು ನಗರದಲ್ಲಿ ಕಲಾಕೃತಿಗಳ ರಚನೆ ಮಾಡಲು ತೊಡಗಿದ್ದರು. ಆಗ ತಾನೆ ಬೆಂಗಳೂರು ನಗರದಲ್ಲಿ ಬೆಳೆಯುತ್ತಿದ್ದ ಸಿನಿಮಾ ಮತ್ತು ನಾಟಕ ಕಂಪನಿಗಳ ಅನುಕೂಲಕ್ಕಾಗಿ ಕಲಾತ್ಮಕ ಸೆಟ್ಟುಗಳನ್ನು ಮತ್ತು ಶಿಲ್ಪಕೃತಿಗಳನ್ನು ತಯಾರಿಸಿಕೊಡುತ್ತಿದ್ದರು. ಈ ಮಧ್ಯೆ ಚಿಕ್ಕಪೇಟೆಯಲ್ಲಿ ತಮ್ಮ ಸ್ವಂತ ಸ್ಟುಡಿಯೊ ತೆಗೆದು ಕಲಾ ರಸಿಕರೊಡನೆ ಸಂಪರ್ಕ ಬೆಳೆಸುವುದರಲ್ಲಿ ಯಶಸ್ವಿಯಾದರು. 1938-39 ರ ವೇಳೆಗೆ, ತಮ್ಮ ಸ್ವಂತ ಕಾಲಿನ ಮೇಲೆ ನಿಲ್ಲಬಲ್ಲ ಕಲಾವಿದರೆನಿಸಿಕೊಂಡರು. ಇತರರಿಗಾಗಿ ರಚಿಸುತ್ತಿದ್ದ ಕಲಾಕೃತಿಗಳ ಜೊತೆಗೆ, ಪ್ರತಿವಾರ ತಮಗೆ ಆತ್ಮಾನಂದವನ್ನು ನೀಡುವ ಸ್ವಂತ ಕೃತಿಯೊಂದನ್ನು ರಚಿಸುವುದರಲ್ಲಿ ಹಿಂದೆ ಬೀಳುತ್ತಿರಲಿಲ್ಲ.

1939 ರಲ್ಲಿ ಬೆಂಗಳೂರು ನಗರದ ಸಿನಿಮಾ ಪ್ರಚಾರ ಮಾಧ್ಯಮದ ಕ್ಷೇತ್ರದಲ್ಲಿ ಪ್ರಯೋಗಾತ್ಮಕವಾಗಿ ತೆರೆದ ಆರ್ಟ್ ಲಿಥೋ ಪ್ರೆಸ್‌ಗೆ ಸುಬ್ಬರಾಯರ ಸೇವೆ ಲಭ್ಯವಾದುದು ಮಾಲೀಕರ ಪಾಲಿಗೆ ಅದೃಷ್ಟವಾಯಿತು. ಲಿಥೋ ಮಾಧ್ಯಮದ ಸರ್ವಪ್ರಕಾರಗಳನ್ನು ಅನತಿ ಕಾಲದಲ್ಲಿ ಅರಗಿಸಿಕೊಂಡ ಸುಬ್ಬರಾಯರ ಪ್ರಯೋಗ ಶಕ್ತಿ "ಆರ್ಟ್ ಲಿಥೋ ಪ್ರೆಸ್"ಗೆ ವರದಾನವಾಯಿತು. ಲಿಥೋ ಪ್ರೆಸ್‌ನ ವ್ಯವಹಾರಗಳು ಶೀಘ್ರಗತಿಯಲ್ಲಿ ಲಾಭದಾಯಕ ಮಟ್ಟವನ್ನು ಮುಟ್ಟಿದವು.

1940 ರಲ್ಲಿ ಸುಬ್ಬರಾಯರು ಅವರ ಭಾವಂದಿರಾದ ಭೀಮರಾಯರ ಪುತ್ರಿ ಸೀತಮ್ಮ ಅವರನ್ನು ದಾಸಪ್ಪನವರ ಒತ್ತಾಯದ ಮೇಲೆ ವಿವಾಹ ಮಾಡಿಕೊಂಡರು.

1942ರ ವರೆಗೆ ಬೆಂಗಳೂರು ನಗರದಲ್ಲಿನ ಏಕಮೇವ ಸೃಜನಶೀಲ ಕಲಾವಿದರಾಗಿ ಬೆಳೆಯುತ್ತಿದ್ದರು. ಇವರಿಗೆ ಒಂದು

ಹೆಣ್ಣುಮಗು ಜನಿಸಿತು. ದುರ್ದೈವದಿಂದ ಅವರ ಪತ್ನಿ ಸೀತಮ್ಮನವರು ಸ್ವರ್ಗಸ್ಥರಾದರು. ಇದರಿಂದ ಬಹಳ ನೊಂದ ಸುಬ್ಬರಾಯರು ಚಿಂತನೆಗಳ ಮಧ್ಯದಲ್ಲಿ ಮುಳುಗಿದರು. ಆ ಸನ್ನಿವೇಶದಲ್ಲಿ ಇವರು ಯಾವ ಕಾಲಕ್ಕೆ ಯಾವ ನಿರ್ಧಾರ ಕೈಗೊಳ್ಳುವರೆಂಬುದು ಅವರ ಆತ್ಮೀಯ ಮಿತ್ರರಿಗೂ ಸಹ ಅರ್ಥವಾಗುತ್ತಿರಲಿಲ್ಲ. ಕೆಲವು ಮಿತ್ರರು ಸುಬ್ಬರಾಯರನ್ನು ಮತ್ತೆ ಸಾಂಸಾರಿಕ ಜೀವನದತ್ತ ತರಲು ಪ್ರಯತ್ನಪಟ್ಟರು. ಆದರೆ ಅವರು ಅತ್ತ ಒಲವು ತೋರಲಿಲ್ಲ. ನಗರದ ವಿವಿಧ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದ ಯುವಕರು, ಸುಬ್ಬರಾಯರ ನಿಕಟವರ್ತಿಗಳಾದರು. ಇವರೊಡನೆ ಗಂಟೆಗಟ್ಟಲೆ ಹರಟೆ ಹೊಡೆದು ಸಂತೋಷದಿಂದ ಕಾಲ ಕಳೆಯುವುದು ಸರ್ವೇ ಸಾಮಾನ್ಯವಾಗಿದ್ದಿತು. ಅನೇಕ ಮಿತ್ರರು ಸಂಜೆ ತಮ್ಮ ಕೆಲಸ ಮುಗಿದೊಡನೆ ಇವರಿದ್ದ ಕೊಠಡಿಗೆ ಬಂದು ನಂತರ ಬಳೆಪೇಟೆ ಕೃಷ್ಣಭವನ ಅಥವಾ ಇವರಿದ್ದ ಸುಬೇದಾರ್ ಛತ್ರಂ ರಸ್ತೆಯಲ್ಲಿನ ರಾಮಕೃಷ್ಣ ಲಂಚ್ ಹೋಮ್‌ನಲ್ಲಿ ಕಾಫಿ ಸವಿಯೊಡನೆ ಸಂಜೆ ಸಭೆ ಮುಗಿಸುತ್ತಿದ್ದರು.

ಅಂತರ್ಯದಲ್ಲಿ ಎಷ್ಟೇ ನೋವಿದ್ದರೂ, ಸುಬ್ಬರಾಯರು ತಮ್ಮ ಮನೋವ್ಯಾಕುಲವನ್ನು ಹೊರಗಡೆ ತೋರ್ಪಡಿಸಿಕೊಂಡು ಪರರನ್ನು ನೋವಿಗೆ ಸಿಲುಕಿಸಲು ಇಷ್ಟಪಡುತ್ತಿರಲಿಲ್ಲ. ಮೇಲಾಗಿ ಅವರು ಅಂದಿನ ಪ್ರಸಿದ್ಧ ಕಲಾಶಾಲೆಯಾಗಿದ್ದ ಮುಂಬಯಿ "ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್"ನಲ್ಲಿ ಕಲಾಶಿಕ್ಷಣವನ್ನು ಹೇಗಾದರೂ ಮಾಡಿ ಮುಂದುವರೆಸಲು ತವಕಿಸುತ್ತಿದ್ದರು. ಇದ್ದ ಒಬ್ಬ ಮಗಳನ್ನು ಸಾಕುವ ಭಾರವನ್ನು ತಮ್ಮ ಅಕ್ಕನವರಾದ ನರಸಮ್ಮನವರಿಗೆ ವಹಿಸಿಕೊಟ್ಟರು. ಇದರಿಂದ ಸುಬ್ಬರಾಯರಿಗೆ ಕಲಾರಂಗದಲ್ಲಿ ದುಡಿಯಲು ಮತ್ತಷ್ಟು ಸ್ವಾತಂತ್ರ್ಯ ದೊರಕಿದಂತಾಯಿತು.

ಒಂದು ದಿನ ಇದ್ದಕ್ಕಿದ್ದಂತೆ ಬೆಂಗಳೂರು ಬಿಟ್ಟು ಮಾಯವಾದರು. ಸ್ನೇಹಿತರಿಗೆಲ್ಲಾ ತವಕವನ್ನುಂಟು ಮಾಡಿದರು. ಕೆಲ ತಿಂಗಳ ನಂತರ ಪುಣೆಯನ್ನು ತಮ್ಮ ವಾಸಸ್ಥಾನವನ್ನಾಗಿ ಮಾಡಿಕೊಂಡು

ಬೆಂಗಳೂರಿನ ಮಿತ್ರರಿಗೆ ಪತ್ರ ಬರೆದರು. ಅನೇಕ ಜನ ಪಿ. ಸುಬ್ಬರಾಯರು ಇನ್ನೂ ಬದುಕಿದ್ದಾರೆಂದು ನಿಟ್ಟುಸಿರು ಬಿಟ್ಟರು. ಪುಣೆಯಲ್ಲಿ ತಮ್ಮ ಜೀವನೋಪಾಯಕ್ಕಾಗಿ ಶ್ರೀ ರಾಮೇಶ್ವರಂ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಕೆಲಸ ಹಿಡಿದಿದ್ದರು. ಈ ಮಧ್ಯೆ ಮುಂಬಯಿಯ "ಜೆ.ಜೆ. ಕಲಾಶಾಲೆ"ಯ ಅಧ್ಯಾಪಕರಾಗಿದ್ದ ಶ್ರೀ ಗೋಂದ್ಲೇಕರ್ ಅವರ ನಿಕಟ ಸಂಪರ್ಕ ಬೆಳೆಸಿ ಅಲ್ಪಕಾಲದಲ್ಲಿ ಅವರ ಪರಮ ಶಿಷ್ಯರಾದರು. ಗೋಂದ್ಲೇಕರ್‌ರವರ ಮಾರ್ಗದರ್ಶನದಲ್ಲಿ ಸುಬ್ಬರಾಯರು ತಮ್ಮ ಕಲಾಕೃತಿಗಳನ್ನು ರಚಿಸಿ ಅನೇಕರ ಮೆಚ್ಚುಗೆಗೆ ಪಾತ್ರರಾದರು. ಅಲ್ಲದೆ "ಜೆ.ಜೆ. ಕಲಾಶಾಲೆ"ಯ ಡಿಪ್ಲೋಮಾವನ್ನು ಪಡೆಯುವುದರಲ್ಲಿ ಯಶಸ್ವಿಯಾದರು. ಇವರು ಪರೀಕ್ಷಾ ಸಮಯದಲ್ಲಿ ರಚಿಸಿದ ಕಲಾಕೃತಿಗಳು ಅತ್ಯಂತ ಶ್ರೇಷ್ಠಮಟ್ಟದ್ದವೆಂದು ತೀರ್ಮಾನಿಸಲಾಗಿದ್ದಿತು. ಅಂದಿನ ನಿಯಮದಂತೆ ಶ್ರೀ ಸುಬ್ಬರಾಯರು ಕಲಾ ವಿದ್ಯಾರ್ಥಿಗಳನ್ನು ನೇರವಾಗಿ ಮುಂಬಯಿ ಕಲಾ ಪರೀಕ್ಷೆಗಳಿಗೆ ಕೂಡಲು ನೆರವಾಗುವಂತೆ ವಿಶೇಷ ಸವಲತ್ತನ್ನು ಕೂಡ ಮಾಡಿದರು.

ಇದರಿಂದ ಬೆಂಗಳೂರಿನ ಇಬ್ಬರು ಮಿತ್ರರಿಗೆ ಡಿಪ್ಲೋಮಾ ದೊರಕಿತಲ್ಲದೆ ಪುಣೆಯ ಅನೇಕ ಕಲಾ ವಿದ್ಯಾರ್ಥಿಗಳಿಗೆ ಅನುಕೂಲವಾಯಿತು. ಈ ಮಧ್ಯೆ ತಮ್ಮ ಜೀವನೋಪಾಯಕ್ಕಾಗಿ ಕೆಲಸ ಮಾಡುತ್ತಿದ್ದ ಶ್ರೀ ರಾಮೇಶ್ವರಂ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಲಿಥೋಮಾಧ್ಯಮದ ಅನೇಕ ಪ್ರಕಾರಗಳನ್ನು ಅತಿ ಕಡಿಮೆ ಸಮಯದಲ್ಲಿ ಕರಗತಮಾಡಿಕೊಂಡರು. ಪ್ರೆಸ್ಸಿನ ಮಾಲೀಕರಿಂದ ಅಚ್ಚುಮೆಚ್ಚಿನ ಕಲಾ ನಿರ್ದೇಶಕರೆಂದು ಸುಬ್ಬರಾಯರು ಹೆಸರುಗಳಿಸಿಕೊಂಡರು.

ಸದಾ ಬದಲಾವಣೆಗಳನ್ನು ಅರಸುತ್ತಿದ್ದ ಅವರ ಮನೋಭಾವನೆ ಅನುಗುಣವಾಗಿ 1945ರ ವೇಳೆಗೆ ಬೆಂಗಳೂರಿನ ಆರ್ಟ್ಸ್ ಲಿಥೋಪ್ರೆಸ್‌ಗೆ ಪಾಲುದಾರರಲ್ಲೊಬ್ಬರಾದ ಹನುಮಂತರಾಯರು ಪುಣೆಗೆ ಹೋಗಿ ಬೆಂಗಳೂರಿನಲ್ಲಿ ಆಧುನಿಕ ಲಿಥೋಪ್ರೆಸ್ ಸ್ಥಾಪನೆ ಮಾಡಲು ಅವರ ಮಾರ್ಗದರ್ಶನವನ್ನು ಬೇಡಿದರು. ಸುಬ್ಬರಾಯರನ್ನು ಕಾಡಿಬೇಡಿ

ಬೆಂಗಳೂರಿಗೆ ಕರೆ ತಂದರು. ಅಂದಿಗೆ ಆಧುನಿಕವೆನಿಸಿದ್ದ 'ಸಿಲಿಂಡರ್ ಲಿಥೋ ಮುದ್ರಣ ಪ್ರೆಸ್' ಅನ್ನು ಅಕ್ಕಿಪೇಟೆಯಲ್ಲಿ ಪ್ರಾರಂಭಿಸಲು ನೆರವಾದರು. ಇದೇ 'ಮಾರುತಿ ಲಿಥೋಪ್ರೆಸ್' ಆಗಿ ಎರಡು ದಶಕಗಳ ಕಾಲ ಬೆಂಗಳೂರಿನ ಸಿನಿಮಾ ಕ್ಷೇತ್ರಕ್ಕೆ ಉತ್ತಮಸೇವೆ ಸಲ್ಲಿಸಿತು.

ಸುಬ್ಬರಾಯರ ಕೈಚಳಕದಿಂದ ಪ್ರೆಸ್ಸಿಗೆ ಹೆಚ್ಚು ಹೆಚ್ಚು ಕೆಲಸ ದೊರಕಿತು. ಆರ್ಥಿಕವಾಗಿ ಸಹ ಈ ಉದ್ಯಮಕ್ಕೆ ಉತ್ತಮ ಪ್ರತಿಫಲ ಬರಲಾರಂಭಿಸಿತು.

ಬೆಂಗಳೂರಿಗೆ ಬಂದ ಸ್ವಲ್ಪ ಸಮಯದಲ್ಲಿ ಬಳೇಪೇಟೆ ರಂಗಸ್ವಾಮಿಗುಡಿ ರಸ್ತೆಯಲ್ಲಿ ಒಂದು ರೂಮ್ ಹಿಡಿದರು. ಬಿಡುವಿನ ವೇಳೆಯಲ್ಲಿ ಅಲ್ಲಿ ಕಲಾಕೃತಿಗಳ ರಚನೆಗೆ ತೊಡಗಿದರು. ತಮ್ಮ ಅನುಭವ, ಅನ್ವೇಷಣೆ, ಸೃಜನಶೀಲ ಮನೋಭಾವನೆಗಳು ಪರಿಪಕ್ವವಾಗಿದ್ದರಿಂದ ಅವರ ಕೃತಿಗಳು ತನ್ನದೇ ಆದ ಅಭಿವ್ಯಕ್ತಿಮಟ್ಟವನ್ನು ಹೊಂದಿ ಹೊರಬಂದವು. ಆಗಾಗ್ಗೆ ತಮ್ಮ ರೂಮಿಗೆ ಬರುತ್ತಿದ್ದ ಸ್ನೇಹಿತರಾದ ಶ್ರೀ ಮೂರ್ತಿ, ಇನಾಮತಿ, ಹರಿರಾವ್, ಎಸ್. ಆರ್. ಸ್ವಾಮಿ, ಮಧ್ಯಸ್ಥ ಶ್ರೀನಿವಾಸರಾವ್, ನಾರಾಯಣರಾವ್, ವಿಷ್ಣುದಾಸ್, ರಾಮದಾಸ್ ವೆನ್ ರಾವ್‌ರವರೊಂದಿಗೆ ಅನೇಕ ಸಲ ತಮ್ಮ ಕೃತಿಗಳ ಬಗ್ಗೆ ಚರ್ಚಿಸುತ್ತಿದ್ದರು. ಇವರಿಂದ ಬೆಂಗಳೂರಿನ ಕಲಾರಂಗ ಶ್ರೀಮಂತವಾಯಿತು. ಕಲಾರಂಗದಲ್ಲಿ ಚಿಂತನೆಗೆ ಅವಕಾಶವಾಯಿತು.

1950 ರಲ್ಲಿ ಬೆಂಗಳೂರಿನಲ್ಲಿ ಜರುಗಿದ ಟಾಟಾ ವಿಜ್ಞಾನ ಸಂಸ್ಥೆಯ ಪ್ಲಾಟಿನಂ ಹಬ್ಬದ ವೇಳೆಗೆ ಮಲ್ಲೇಶ್ವರದಲ್ಲಿ ಒಂದು ದೊಡ್ಡ ಪ್ರಮಾಣದ ಕಲಾ ಪ್ರದರ್ಶನ ಏರ್ಪಾಟಾಗಿದ್ದಿತು. ಅಲ್ಲಿ ಪಿ. ಸುಬ್ಬರಾಯರ ಕೃತಿಗಳು ಅನೇಕ ಸೃಜನಶೀಲ ಕಲಾವಿದರಿಗೆ, ಕಲಾ ರಸಿಕರಿಗೆ ಅತ್ಯಂತ ಪ್ರಮುಖ ಕೃತಿಗಳಾಗಿ ಮೆರೆದದ್ದು ಅವರ ವ್ಯಕ್ತಿತ್ವಕ್ಕೆ ಹೆಚ್ಚು ಇಂಬು ಕೊಟ್ಟಿತು.

ಮತ್ತೆ ಬದಲಾವಣೆಯ ಹಂತ ಅವಲೋಕಿಸಿದ ಸುಬ್ಬರಾಯರು,

ಕೆಲವು ತಿಂಗಳ ಕಾಲ ತಮ್ಮ ರೂಮನ್ನು ಕಾರ್ಯಕ್ಷೇತ್ರವನ್ನಾಗಿಸಿಕೊಂಡು, ಕೃತಿರಚನೆಯಲ್ಲಿ ತೊಡಗಿಸಿಕೊಂಡರು. ಈ ವೇಳೆಗೆ ಮಾರುತಿ ಲಿಥೋಪ್ರೆಸ್‌ನ ಕೆಲಸಕ್ಕೆ ವಿದಾಯ ಹೇಳಿದ್ದರು.

ಕೆಲವು ದಿನ ಏಕಾಂತವಾಸ, ಕೆಲವು ದಿನ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಹಾಜರು, ನೆಂಟರು ಮನೆಗಳ ಸಂದರ್ಶನ ಇನ್ನೂ ಮುಂತಾದ ಬದಲಾದ ಮನಸ್ಸಿನಿಂದ ಹೊಸದನ್ನು ಅರಸುತ್ತಿದ್ದ ಸುಬ್ಬರಾಯರು, ಬೆಂಗಳೂರು ನಗರದ ಕಲಾಮಂದಿರಕ್ಕೆ ಹೋಗಿ ಆಗಿನ ನಿರ್ದೇಶಕರಾಗಿದ್ದ ಅ.ನ. ಸುಬ್ಬರಾಯರನ್ನು ಒಪ್ಪಿಸಿ ಅಲ್ಲಿ ಅಧ್ಯಾಪಕ ವೃತ್ತಿಯನ್ನು ಕೈಗೊಂಡರು. ಕಲಾಮಂದಿರಕ್ಕೆ ಬರುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ ಏರತೊಡಗಿತು. ಆಗಿನ ಮದ್ರಾಸ್ ತಾಂತ್ರಿಕ ಕಲಾ ಪರೀಕ್ಷೆಗಳಿಗೆ ಹಾಜರಾಗುತ್ತಿದ್ದ, ಅಭ್ಯರ್ಥಿಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿತ್ತು. ಆದರೆ ಸುಬ್ಬರಾಯರ ಮನಸ್ಸಿನಲ್ಲಿ ಏನೋ ಆತಂಕ-ದುಗುಡ ಹೊಸದನ್ನು ಅರಸುವ ಅಭಿಲಾಷೆ ಕಾಡುತ್ತಿತ್ತು.

ಬೆಂಗಳೂರಿನ ಕಲಾಮಂದಿರದಲ್ಲಿ ಅಧ್ಯಾಪಕರಾಗಿ ಕೆಲಸ ಒಪ್ಪಿಕೊಂಡಿದ್ದಾಗ ಬಳೇಪೇಟೆಯಿಂದ ಕೆಲವು ದಿನ ಬೈಸಿಕಲ್‌ನಲ್ಲಿ ಹೋಗುತ್ತಿದ್ದರು. ಇದ್ದಕ್ಕಿದಂತೆ ಒಂದು ದಿನ ಇವರ ಬೈಸಿಕಲ್ಲು ಕಲಾಮಂದಿರದ ಕೆಳಗೆ ಬಿಟ್ಟಿದ್ದಾಗ ಕಣ್ಮರೆಯಾಯಿತು. ಅಂದಿನಿಂದ ಸಿಟಿ ಬಸ್ಸಿನಲ್ಲಿ ಮೆಜೆಸ್ಟಿಕ್‌ನಿಂದ ಗಾಂಧಿಬಜಾರ್‌ಗೆ ಹೋಗಿ ಕಲಾಮಂದಿರ ತಲುಪುತ್ತಿದ್ದರು. ಕೈಯಲ್ಲಿ ಕಾಸಿಲ್ಲದ ಅನೇಕ ದಿನಗಳಲ್ಲಿ, ಬಳೇಪೇಟೆಯಿಂದ ಸುಲ್ತಾನ್ ಪೇಟೆ ಮಾರ್ಗವಾಗಿ ಆಗಿನ ವಿಕ್ಟೋರಿಯಾ ಆಲ್ಬರ್ಟ್ ರಸ್ತೆಯ ಮುಖೇನ ನಡೆದು ಹೋಗುತ್ತಿದ್ದರು. ಇಷ್ಟಾದರೂ ಅವರು ಹಣಕ್ಕಾಗಿ ಅ.ನ. ಸುಬ್ಬರಾಯರನ್ನು ಪೀಡಿಸುತ್ತಿರಲಿಲ್ಲ.

ವಿದ್ಯಾರ್ಥಿಗಳ ದೃಷ್ಟಿಯಲ್ಲಿ, ಸುಬ್ಬರಾಯರು ಅಚ್ಚುಮೆಚ್ಚಿನ ಗುರು. ಸ್ನೇಹಿತರಂತೆ ವರ್ತಿಸುತ್ತಿದ್ದ ಇವರ ಗುಣಗಳಿಗೆ ಮಾರುಹೋದ ವಿದ್ಯಾರ್ಥಿಗಳು ಬೆಳಗಿನಿಂದ ಸಂಜೆಯವರೆಗೆ ಕಲಾಮಂದಿರದಲ್ಲಿ ತಮ್ಮ ಕಾಲ ಕಳೆಯಲು ಬಹಳ ಉತ್ಸುಕರಾಗಿರುತ್ತಿದ್ದರು. ನಿಸರ್ಗ ದೃಶ್ಯಗಳ

ಚಿತ್ರಗಳ ಅಧ್ಯಯನಕ್ಕೆ ಹೊರಗಡೆ ಹೋದಾಗ ಹೆಣ್ಣುಮಕ್ಕಳು ತಮ್ಮ ತಮ್ಮ ಮನೆಗಳಿಂದ ಉಪ್ಪಿಟ್ಟು, ಇಡ್ಲಿ, ಕಾಫಿಗಳನ್ನು ತಂದು ಎಲ್ಲ ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ ಹಂಚಿ ತಾವೂ ತಿಂದು ತೃಪ್ತಿಪಟ್ಟುಕೊಳ್ಳುತ್ತಿದ್ದರು. ನಂತರ ಚಿತ್ರಕೃತಿಗಳನ್ನು ರಚಿಸಿಕೊಂಡು ಮನೆಗೆ ಹಿಂತಿರುಗುತ್ತಿದ್ದರು.

ಈ ಸ್ನೇಹಮಯ ವಾತಾವರಣ ಬಹಳ ದಿನ ಮುಂದುವರೆಯಲಿಲ್ಲ. ಇವರ ಅನ್ವೇಷಣೆ ಮನೋಭಾವ ಹಾಗೂ ಜೀವನದಲ್ಲಿ ಅತೃಪ್ತಿ, ಅವರನ್ನು ಬೆಂಗಳೂರಿನಿಂದ ಹೊರಗಡೆ ಹೋಗುವುದಕ್ಕೆ ಪ್ರೇರೇಪಿಸಿತು. ಸ್ವಲ್ಪ ಕಾಲದಲ್ಲಿಯೇ ದೆಹಲಿಯಲ್ಲಿ ಸುಬ್ಬರಾಯರು ಇರುವರೆಂದು ಗೊತ್ತಾಯಿತು. ಆಗ ತಾನೆ ಅಸ್ತಿತ್ವಕ್ಕೆ ಬಂದಿದ್ದ "ದೆಹಲಿ ಕನ್ನಡ ಸಂಘ"ದ ಸದಸ್ಯರೊಡನೆ ನಿಕಟ ಸಂಪರ್ಕವಿರಿಸಕೊಂಡರು. ಆಗಿನ ಕರ್ನಾಟಕವನ್ನು ರಂ.ರಾ. ದಿವಾಕರ ಹಾಗೂ ಹುಕ್ಕೇರಿಕರ ರಾಮರಾವ್ ಅವರ ಪರಿಚಯವಾಯಿತು.

ಒಂದೆರಡು ವರ್ಷಗಳ ತರುವಾಯ 1957ರ ವೇಳೆಗೆ ಸುಬ್ಬರಾಯರ ಕ್ರಿಯಾಶಕ್ತಿಯನ್ನು ಅರಿತುಕೊಂಡ ಕೆಲವು ಮಹನೀಯರು ಧಾರವಾಡದಲ್ಲಿ ಆಗತಾನೆ ಸ್ಥಾಪಿತವಾಗಿದ್ದ ಜನತಾ ಶಿಕ್ಷಣ ಸಂಸ್ಥೆಯ ಡಿಸೈನ್ ವಿಭಾಗಕ್ಕೆ ನಿರ್ದೇಶಕರಾಗಿ ಬರಲು ಕೋರಿಕೊಂಡರು. ಅಂತೆಯೇ ಸುಬ್ಬರಾಯರು ಧಾರವಾಡಕ್ಕೆ ಬಂದು ನೆಲೆಸಿದರು. ಅಲ್ಲಿನ ಡಿಸೈನ್ ಸೆಂಟರಿನ ಮುಖ ಬದಲಾಯಿಸುವುದರಲ್ಲಿ ತೊಡಗಿದ್ದ ಸುಬ್ಬರಾಯರು ಅತ್ಯಲ್ಪ ಕಾಲದಲ್ಲಿ ಅನೇಕ ಸಾಹಿತಿಗಳಿಗೆ, ಕಲಾವಿದರಿಗೆ ಮತ್ತು ಸಮಾಜ ಸೇವಕರಿಗೆ ಪರಿಚಿತರಾದರು. ಅಭಿವ್ಯಕ್ತಿ ಪಥದತ್ತ ಕಾಲಿರಿಸಿದ 'ವಿನ್ಯಾಸ ಕೇಂದ್ರ' ಜನಜನಿತವಾಯಿತು.

ಸುಬ್ಬರಾಯರ ಜೀವನದಲ್ಲಿ ಅತಿ ಮುಖ್ಯವಾದ ಘಟ್ಟ ಅಂದರೆ 1964ರ ವೇಳೆಗೆ ಮದುವೆಗೆ ಸಿದ್ಧವಾಗಿದ್ದ ಅವರ ಮಗಳಿಗೆ ಸೂಕ್ತ ವರನನ್ನು ಹುಡುಕಿ ವಿವಾಹ ಮಾಡುವ ಸುಯೋಗ. ಹರಿಹರದ ದೀಕ್ಷಿತರ ಮಗ ಶ್ರೀ ಕೃಷ್ಣಮೂರ್ತಿಯವರೇ ವರ. ಧಾರವಾಡ ನಗರದ ಎಲ್ಲ

ಪ್ರತಿಷ್ಠಿತ ನಾಗರಿಕರು, ಸಾಹಿತಿಗಳು ಮದುವೆಗೆ ಬಂದು ಹರಸಿ, ಸುಬ್ಬರಾಯರ ಮನಸ್ಸಿಗೆ ಸಂತಸವನ್ನು ಕೊಟ್ಟರು. ಅಲ್ಲದೆ ಅವರ ಮಿತ್ರರು, ನೆಂಟರು ಅಪಾರ ಸಂಖ್ಯೆಯಲ್ಲಿ ಹಾಜರಿದ್ದು ಮದುವೆ ಮಂಟಪಕ್ಕೆ ಮೆರುಗು ಕೊಟ್ಟರು.

ಮತ್ತೆ ಬದಲಾವಣೆಯ ಕಾಲ ಬಂದಿತು. ಹುಕ್ಕೇರಿಕರ ರಾಮರಾಯರ ನಿಧನದಿಂದ ಇವರು ಕೆಲಸಮಾಡುತ್ತಿದ್ದ 'ವಿನ್ಯಾಸ ಕೇಂದ್ರದ' ವ್ಯವಸ್ಥೆ ಬದಲಾಯಿತು. ಸುಬ್ಬರಾಯರನ್ನು ಕೆಲವರು ಸರಿಯಾಗಿ ನಡೆಸಿಕೊಳ್ಳಲಿಲ್ಲ. ಒಂದು ದಿನ ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು ಹೊರ ನಡೆದರು.

ಕೆಲವು ಕಾಲ ಧಾರವಾಡದಲ್ಲಿ ವಾಸಿಸಿ, 1965ರ ಕೊನೆಯಲ್ಲಿ ದೆಹಲಿಗೆ ತಮ್ಮ ವಾಸ್ತವ್ಯವನ್ನು ಬದಲಾಯಿಸಿದರು. ಅಲ್ಲಿ ಶಂಕರ್ಸ್‌ವೀಕ್ಲಿಯ ಮಕ್ಕಳ ಪುಸ್ತಕ ಪ್ರಕಟಣೆಗಳಿಗೆ ಚಿತ್ರಗಳನ್ನು ಒದಗಿಸಲು ಒಪ್ಪಿಕೊಂಡು ಅನತಿ ಕಾಲದಲ್ಲಿ ಅವರ ಮೆಚ್ಚಿಗೆಗಳಿಸಿ ಹೆಚ್ಚಿನ ಜವಾಬ್ದಾರಿಯನ್ನು ವಹಿಸಿಕೊಂಡರು. ಇವರ ಅತ್ಯಂತ ಅಚ್ಚುಕಟ್ಟಾದ ರೇಖಾಚಿತ್ರಗಳು ಹಾಗೂ ವರ್ಣಚಿತ್ರಗಳು ಮಕ್ಕಳ ಪುಸ್ತಕಗಳಿಗೆ ವಿಶೇಷ ಆಕರ್ಷಣೆಯನ್ನು ಕೊಟ್ಟವು. ಈ ಅವಧಿಯಲ್ಲಿ ವರ್ಣ ವಿನ್ಯಾಸದ ಹೊಸ ಆಯಾಮಗಳನ್ನು ಸುಬ್ಬರಾಯರು ಕಂಡುಕೊಂಡರು.

ವಿಧಿ ಇವರನ್ನು ಒಂದು ಕಡೆ ಇರಲು ಬಯಸಲಿಲ್ಲವೇನೋ! ಸುಬ್ಬರಾಯರು ಶಂಕರ್ಸ್‌ವೀಕ್ಲಿ ಕ್ಷೇತ್ರದಿಂದ ಬಿಡುಗಡೆ ಹೊಂದಿ, ದೆಹಲಿಯ ಜನಪತ್ ರಸ್ತೆಯಲ್ಲಿ 'ಶಾರದ ಉಕಿಲ್ ಕಲಾಶಾಲೆ ' ಗೆ ಪ್ರಾಂಶುಪಾಲರಾಗಿ ನೇಮಕಗೊಂಡರು.

ಅತ್ಯಂತ ನವ್ಯ ಹಾಗೂ ಪ್ರಗತಿಪರ ಅನ್ವೇಷಕರಾಗಿದ್ದ ಸುಬ್ಬರಾಯರ ಆಗಮನ ಅಲ್ಲಿನ ಕಲಾ ವಿದ್ಯಾರ್ಥಿಗಳಿಗೆ ಹೊಸ ಹುರುಪು ತಂದು ಕೊಟ್ಟಿತು. ಕಲಾವಿದ್ಯಾರ್ಥಿಗಳಿಗಾಗಿ ಅನೇಕ ಕಲಾತ್ಮಕ ಸ್ಥಳಗಳ ಪ್ರವಾಸಗಳನ್ನು ಹಮ್ಮಿಕೊಟ್ಟರು. ನವ್ಯತಂತ್ರಗಳನ್ನು ಬೋಧಿಸಿದರು.

ಕೃತಿಗಳು ಕೇವಲ ಅನುಕರಣೆಯಾಗದೆ ಸೃಜನಾತ್ಮಕವಾಗಿರಬೇಕೆಂದು ಮನನ ಮಾಡಿಕೊಟ್ಟರು. ಚಿತ್ರಕೃತಿಗಳನ್ನು ಕಾವ್ಯಮಯವಾಗಿ ಸೃಜಿಸುವ ಆಯಾಮವನ್ನು ಬೋಧಿಸಿದರು. ಇದರಿಂದ ಅವರಿಗೆ ಆತ್ಮತೃಪ್ತಿ ದೊರಕಿದ್ದೇನೋ ನಿಜ. ಆದರೆ ಸದಾ ಅವರ ಮನಸ್ಸಿನಲ್ಲಿ ಕೊರೆಯುತ್ತಿದ್ದ ನಿಗೂಢ ಸಮಸ್ಯೆಗಳಿಗೆ ಪರಿಹಾರ ಇನ್ನು ಸಿಕ್ಕಿರಲಿಲ್ಲ

1965ರಲ್ಲಿ ಬೆಂಗಳೂರು ನಗರಕ್ಕೆ ಬಂದಿದ್ದಾಗ 'ಚಿತ್ರಕಲಾ ಪರಿಷತ್ತು' ಪ್ರಾರಂಭ ಮಾಡಿದ್ದ ಕಲಾ ವಿದ್ಯಾಲಯಕ್ಕೆ ಭೇಟಿ ಇತ್ತು ಬೆಂಗಳೂರಿಗೆ ಮರಳಿ ಬರುವ ತವಕ ವ್ಯಕ್ತಪಡಿಸಿದ್ದರು.

1966ರಲ್ಲಿ ಬೆಂಗಳೂರಿನ ಅನೇಕ ಕಲಾವಿದರು ಪ್ರಥಮವಾಗಿ ದೆಹಲಿಯಲ್ಲಿ ಕರ್ನಾಟಕದ ಕಲಾವಿದರ ಕೃತಿಗಳನ್ನು ಪ್ರದರ್ಶಿಸುವ ಸಲುವಾಗಿ 'ಚಿತ್ರಕಲಾ ಪರಿಷತ್ತಿನ' ಋಖೇನ ಯೋಜನೆಯೊಂದನ್ನು ತಯಾರಿಸಿದರು. ಅದರಂತೆ ಕಲಾವಿದರಾದ ಪಿ. ಆರ್. ತಿಪ್ಪೇಸ್ವಾಮಿ, ನಂಜುಂಡರಾವ್, ಪಿ. ರಾಜಶೇಖರ್, ಅರಗಂ ಕೃಷ್ಣಮೂರ್ತಿ, ಎಸ್.ಜಿ. ಶೇಷಗಿರಿ, ದಿವಂಗತ ಎಸ್.ಎಸ್. ಕುಕ್ಕೆ ಮೊದಲಾದವರು ತಮ್ಮ ಕಲಾಕೃತಿಗಳೊಡನೆ ದೆಹಲಿಗೆ ಭೇಟಿ ಇತ್ತಿದ್ದರು.

ದೆಹಲಿಯಲ್ಲಿ ಚಿರಪರಿಚಿತರಾಗಿದ್ದ ಪಿ. ಸುಬ್ಬರಾಯರು ಬೆಂಗಳೂರಿನ ಈ ಕಲಾವಿದರನ್ನು ಸ್ವಾಗತಿಸಿ ವಾಸ್ತವ್ಯಕ್ಕೆ ಏರ್ಪಾಡು ಮಾಡಿಕೊಟ್ಟರು. "ಕರೋಲ್ ಬಾಗ್"ನ ಶ್ರೀ ಆಚಾರ್ಯ ಮೆಸ್‌ನಲ್ಲಿ ಒಂದು ಸರಳವಾದ ಭೋಜನಕೂಟವನ್ನೂ ಏರ್ಪಡಿಸಿದ್ದರು. ಶ್ರೀ ಆಚಾರ್ಯರವರು ಹೆಸರಾಂತ ಕಲಾವಿದರಾದ ಶ್ರೀ ಕೆ. ಕೆ. ಹೆಬ್ಬಾರ್‌ರವರ ಸಮೀಪದ ಬಂಧುಗಳು. ಆಚಾರ್ಯರೂ ಕಲಾವಿದರನ್ನು ಬಹಳ ಆತ್ಮೀಯವಾಗಿ ಬರಮಾಡಿಕೊಂಡು ಔತಣವನ್ನು ಉಣಬಡಿಸಿದರು.

ಆ ಕರ್ನಾಟಕದ ಕಲಾವಿದರ ತಂಡ ಬೆಂಗಳೂರಿಗೆ ಹಿಂತಿರುಗಿ ಬಂದರಾದರೂ, ಸುಬ್ಬರಾಯರ ಕೊನೆಯ ಭೇಟಿ ಅದಾಗಬಹುದೆಂದು ಭಾವಿಸಿರಲಿಲ್ಲ.

ಇದಾದ ಕೆಲವು ತಿಂಗಳುಗಳ ನಂತರ, 1967ರಲ್ಲಿ ಒಂದು ದಿನ ದೆಹಲಿ ಪತ್ರಿಕೆಗಳಲ್ಲಿ ಪಿ. ಸುಬ್ಬರಾಯರು ನಿಧನರಾದ ಘೋರ ವಾರ್ತೆ ತಿಳಿದು ಎಲ್ಲರಿಗೂ ಸಂಕಟವಾಯಿತು.

ದೆಹಲಿಯಲ್ಲಿ ತಮ್ಮ ಕೊನೆಯ ದಿನಗಳ ಅವಧಿಯಲ್ಲಿ ಸುಬ್ಬರಾಯರಿಗೆ ಒಂದು ಅವ್ಯಕ್ತ ಸಂಕಟ. ಯಾರೊಂದಿಗೂ ಅವರು ಅದನ್ನು ಬಾಯಿ ಬಿಟ್ಟು ಹೇಳುತ್ತಿರಲಿಲ್ಲ. ಶಂಕರ್ಸ್ ವೀಕ್ಲಿಯೊಂದಿಗೆ ಇವರಿಗಿದ್ದ ಸಂಬಂಧ ಕಡಿದು ಹೋದ ಮೇಲೆ ಅಂತರ್ಯದಲ್ಲಿ ಯಾವುದೋ ವ್ಯಸನಕರವಾದ ಪ್ರಶ್ನೆ ಇವರನ್ನು ಕಾಡುತ್ತಿತ್ತು. ಕೊನೆಯ ದಿನ ರಾತ್ರಿ ಇವರು ಆಚಾರ್ಯರೊಡನೆ ಚೆಸ್ ಆಡುತ್ತಿದ್ದವರು ಮಧ್ಯೆ ಇದ್ದಕ್ಕಿದ್ದಂತೆ ಎದ್ದು ತಮ್ಮ ರೂಮಿಗೆ ಹೋದರು. ಆ ರಾತ್ರಿ ಏನಾಯಿತೋ ಏನೊ; ಸುಬ್ಬರಾಯರು ಹೇಗೆ ಮರಣಿಸಿದರು, ಇದು ಹೇಗಾಯಿತು ಎಂಬುದು ಇನ್ನೂ ಬಿಡಿಸಲಾರದ ಪ್ರಶ್ನೆಯಾಗಿದೆ. ಅವರ ಅಣ್ಣಂದಿರಾದ ಶ್ರೀ ಲಕ್ಷ್ಮೀನರಸಪ್ಪನವರು ಹಾಗೂ ಅವರ ಅಳಿಯಂದಿರಾದ ಶ್ರೀ ಕೃಷ್ಣಮೂರ್ತಿಯವರು ದೆಹಲಿಗೆ ಹೋಗಿ ಅವರ ಕೊಠಡಿಯಲ್ಲಿ ಅಳಿದು, ಉಳಿದಿದ್ದ ಕಲಾಕೃತಿಗಳನ್ನು ವಾಪಸ್ಸು ತಂದರು.

ಸುಬ್ಬರಾಯರ ಜೀವನದಲ್ಲಿ ಬಹುಶಃ ಸುಖ ಮತ್ತು ನೆಮ್ಮದಿಯನ್ನು ಕಂಡ ಕಾಲ ಕೇವಲ ಧಾರವಾಡದ ಅವರ ವಾಸ್ತವ್ಯ ಎನ್ನಬಹುದು. ಅದಕ್ಕೆ ಹಿಂದಿನ ಹಾಗೂ ಮುಂದಿನ ಜೀವನಕ್ಷೇತ್ರ ಕ್ಲಿಷ್ಟಮಯ ಹಾಗೂ ದುರಂತಗಳ ಸರಮಾಲೆಯೊಂದಿಗೆ ಮುಕ್ತಾಯವಾದುದು ಅತ್ಯಂತ ಶೋಚನೀಯ ವಿಷಯ. ದೆಹಲಿಯಲ್ಲಿ ಅವರ ಅಂತ್ಯ ಅಷ್ಟು ದುರ್ಭರ ಸನ್ನಿವೇಶ ಹಾಗೂ ನಿಗೂಢವಾಗಿರಬಹುದೆಂದು ಯಾರೂ ಊಹಿಸಲು ಅಸಾಧ್ಯ.

ಹಿಂದೊಮ್ಮೆ ಅ.ನ. ಸುಬ್ಬರಾಯರ ಜೊತೆಯಲ್ಲಿ ಧರ್ಮಸ್ಥಳದಲ್ಲಿ ನಡೆದ ಧಾರ್ಮಿಕ ಸಮ್ಮೇಳನದ ನಡಾವಳಿ ಸಮಯದಲ್ಲಿ ಏರ್ಪಡಿಸಿದ್ದ ಕಲಾ ಪ್ರದರ್ಶನದಲ್ಲಿ ಪ್ರಮುಖ ಕಲಾವಿದರಾಗಿ ಪಿ. ಸುಬ್ಬರಾಯರು ಪಾಲ್ಗೊಂಡಿದ್ದರು. ಆಗಿನ ಕ್ಷೇತ್ರದ

ಧರ್ಮಾಧಿಕಾರಿಗಳಾಗಿದ್ದ ದಿವಂಗತ ಮಂಜಯ್ಯ ಹೆಗ್ಗಡೆಯವರು ಕಲಾವಿದರೊಡನೆ ಹೆಚ್ಚಿನ ಸಮಯವನ್ನು ಕಳೆಯುತ್ತಿದ್ದರು. ಪಿ. ಸುಬ್ಬರಾಯರ ಚಿತ್ರಗಳಲ್ಲಿನ ಮಾನವೀಯತೆಯ ಅಂತರಾರ್ಥದ ಬಗ್ಗೆ ಅತ್ಯಂತ ಪ್ರಶಂಸೆಯ ನುಡಿಗಳನ್ನು ಸದಾ ಆಡುತ್ತಿದ್ದರು. ರಾಯರಿಗೆ ಧರ್ಮಸ್ಥಳದಲ್ಲಿಯೇ ಇದ್ದು, ಕಲಾ ಕೈಂಕರ್ಯವನ್ನು ಕೈಗೊಳ್ಳುವಂತೆ ಸೂಕ್ಷ್ಮವಾಗಿ ಸೂಚಿಸಿದ್ದರು. ಬಹುಶಃ ಮಂಜಯ್ಯ ಹೆಗ್ಗಡೆಯವರ ಆದೇಶವನ್ನು ಪಾಲಿಸಿ ಧರ್ಮಸ್ಥಳದಲ್ಲಿ ಕಲಾಸೇವೆ ಮಾಡಿಕೊಂಡು ಬಂದಿದ್ದರೆ ರಾಯರು ಇನ್ನೂ ಹತ್ತಾರು ವರ್ಷಗಳ ಜೀವನ ಸಾರ್ಥಕ ಪಡಿಸಿಕೊಳ್ಳುತ್ತಿದ್ದರೇನೋ, ಆದರೆ ವಿಧಿ ಅವರನ್ನು ಅರ್ಧದಲ್ಲಿಯೇ ಎಳೆದೊಯ್ದುದು ವಿಪರ್ಯಾಸ.

ಅಂತಃಕರಣ, ಮಾನವೀಯತೆ, ಬೇರೆಯವರ ಬಗ್ಗೆ ಅನುಕಂಪ, ಬಡವರ ಕಷ್ಟದಲ್ಲಿ ತಾವೂ ಮರುಗುವುದು, ಯಾರದೇ ಕಾರ್ಯವಿರಲಿ, ತಮ್ಮ ಕೈಲಾದ ಸಹಾಯ ಮಾಡುವ ಧೋರಣೆ ಇವುಗಳನ್ನು ಮೈವೆತ್ತಿದ್ದ ಸುಬ್ಬರಾಯರಂತಹ ವ್ಯಕ್ತಿ, ಕಲಾವಿದರಲ್ಲಿ ಅಪರೂಪ. ಸಂತೋಷ, ದುಃಖ ಹಾಗೂ ಕಷ್ಟದ ಸಮಯಗಳಲ್ಲಿ ಜನರೊಂದಿಗೆ ಸ್ಪಂದಿಸುವುದು ಅವರ ಆತ್ಮದ ಆಕಾಂಕ್ಷೆಯಾಗಿದ್ದಿತು. ಇಂತಹ ಮಾನವೀಯ ವ್ಯಕ್ತಿತ್ವ ಉಳ್ಳವರು ನಮ್ಮ ಜೊತೆಗಿಲ್ಲವೆಂಬ ಕೊರತೆ ಶ್ರೀ ಸುಬ್ಬರಾಯರನ್ನು ಬಲ್ಲವರಿಗೆಲ್ಲಾ ಕಾಡಿಸುತ್ತದೆ.

ಸುಬ್ಬರಾಯರು ದಷ್ಟಪುಷ್ಟವಾದ ದೇಹವನ್ನು ಹೊಂದಿದ್ದರು. ವರ್ಚಸ್ಸಿನ ಮುಖಚರ್ಯೆ ಮತ್ತು ಸದಾ ಹಾಸ್ಯ ಪ್ರವೃತ್ತಿಯ ನಗುಮುಖ. ಬಂಗಾಳಿ ಕಚ್ಚೆಪಂಚೆ, ಬಿಳಿಯ ಜುಬ್ಬಾ-ಇವು ಅವರ ದೈನಂದಿನ ಉಡುಪು. ಕಲಾವಿದರಿಗೆ ಅನ್ವಯಿಸುವ ನಡವಳಿಕೆಯನ್ನು ಹೊಂದಿದ್ದ ಇವರ ನಡೆನುಡಿ ಮತ್ತು ವ್ಯವಹಾರ ಎಲ್ಲವೂ ಕಲಾತ್ಮಕವಾಗಿರುತ್ತಿದ್ದುವು. ಒಂದು ಸಲ ಇವರೊಡನೆ ಮಾತನಾಡಿದರೆ ಸಾಕು, ಸ್ನೇಹ ನಿರಂತರವಾಗಿ ಮುಂದುವರೆಸುವ ಅಪೇಕ್ಷೆ ಜನರಲ್ಲಿ ಮೂಡುತ್ತಿದ್ದುದು ಸಹಜವಾಗಿತ್ತು.

ರಾಯರ ಊಟ, ತಿಂಡಿ ವ್ಯವಹಾರಗಳು ಸಹ ಅಷ್ಟೇ

ಬದಲಾವಣೆಗಳ ಸರಮಾಲೆಯಾಗಿರುತ್ತಿದ್ದವು. ಬೆಂಗಳೂರಿನಲ್ಲಿರುವಾಗ, ಯಾವ ಸ್ನೇಹಿತರು ಬಂದರೂ ಸಹ, ಕಾಫಿ ಕೊಡಿಸದೆ ಕಳುಹಿಸುತ್ತಿರಲಿಲ್ಲ. ಕೆಲವು ಸಲ ತಮ್ಮ ಅಣ್ಣನ ಮನೆಗೆ ಊಟಕ್ಕೆ ಹೋಗುವ ವಾಡಿಕೆ ಇತ್ತು. ಇದ್ದಕ್ಕಿದ್ದಂತೆ ರುಚಿಕರವಾದ ಊಟ ಎಲ್ಲಿ ಸಿಗುತ್ತದೆಂಬ ಜಿಜ್ಞಾಸೆಯಲ್ಲಿ ಅಲೆದು ಕೊನೆಗೆ ಯಾವುದೋ ಹೋಟೇಲ್ ಅಥವಾ ಮೆಸ್‌ನಲ್ಲಿ ಊಟ ಸವಿಯುತ್ತಿದ್ದರು. ಕೆಲವೊಮ್ಮೆ ತಮ್ಮ ರೂಮಿನಲ್ಲಿರುತ್ತಿದ್ದ ಸೀಮೆಎಣ್ಣೆ ಒಲೆಯ ಸಹಾಯದಿಂದ, ತಾವೇ ಅನ್ನ ಹಾಗೂ ತೊವ್ವೆಗಳನ್ನು ಮಾಡುಕೊಂಡು ಊಟ ಮಾಡಿ ತೃಪ್ತಿಪಡೆಯುತ್ತಿದ್ದರು. 1952ರ ಸುಮಾರಿನಲ್ಲಿ ಬಳೇಪೇಟೆ ಸಂದಿಯೊಂದರಲ್ಲಿ ವಡೆ, ಬೋಂಡಗಳನ್ನು ಮಾಡುವ ಸಣ್ಣ ಅಂಗಡಿ ಪ್ರಾರಂಭವಾಯಿತು. ಸುಬ್ಬರಾಯರ ನಾಲಿಗೆ ಚಪಲ ಸಾಮಾನ್ಯವಾಗಿ, ಪ್ರತಿದಿನ ಈ ಅಂಗಡಿಯ ತಿಂಡಿಗಳಿಗೆ ಮಾರುಹೋಗುತ್ತಿತ್ತು.

ಸಾಹಿತ್ಯದೊಡನೆ, ಸಾಹಿತಿಗಳೊಡನೆ ನಿಕಟ ಸಂಪರ್ಕ ಇಟ್ಟುಕೊಂಡಿದ್ದ ಸುಬ್ಬರಾಯರು, ಕನ್ನಡ ಪುಸ್ತಕಗಳ ಸಂಗ್ರಹ ಮಾಡಿಕೊಂಡಿದ್ದರಲ್ಲದೆ, ಸ್ನೇಹಿತರಿಂದ ಪುಸ್ತಕಗಳನ್ನು ಎರವಲಾಗಿ ತಂದು ಓದುತ್ತಿದ್ದರು. ಅವರ ಮನಸ್ಸಿನ ತುಮುಲಗಳ ಮಥನದಲ್ಲಿ ತಮ್ಮನ್ನು ತಾವೇ ಮರೆಯುವುದಕ್ಕಾಗಿ ಸದಾ ಕೆಲಸ ಅಥವಾ ಓದುವ ಹವ್ಯಾಸವನ್ನು ಕಾಪಾಡಿಕೊಂಡು ಬಂದಿದ್ದರು.

ಸುಬ್ಬರಾಯರ ಕಲಾಕೃತಿಗಳ ಬಗ್ಗೆ ಹೇಳುವುದು ಅತ್ಯಂತ ಕಠಿಣವಾದ ಕೆಲಸ. ಆದರೆ ಕೆಲವು ಕೃತಿಗಳ ವಿಶ್ಲೇಷಣೆ ಅನಿವಾರ್ಯ. ಮಹಾತ್ಮಗಾಂಧಿಯವರ ದುರಂತ ಮರಣದ ನಂತರ, ಬೆಂಗಳೂರು ಕಲಾ ಮಂದಿರದಲ್ಲಿ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿದ್ದಾಗ ಒಂದು ಅಮೂಲ್ಯ ಕೃತಿ ಎಲ್ಲರ ಗಮನವನ್ನು ಸೆಳೆದಿತ್ತು. ಅದರೊಂದಿಗೆ ಗ್ರಾಮೀಣ ಸಮಾಜಕ್ಕೆ ಸಂಬಂಧಿಸಿದ ಕೆಲವು ಕಲಾಕೃತಿಗಳು ಜನರಿಗೆ ಅತ್ಯಂತ ಕುತೂಹಲಕಾರಿ ವಸ್ತುಗಳಾಗಿ ಕಂಡಿದ್ದವು. ಇದರಲ್ಲಿ ಮಹಾತ್ಮಗಾಂಧಿಯವರನ್ನು ಕುರಿತಾದ ಚಿತ್ರಕೃತಿಯಲ್ಲಿ, ಒಂದು

ತ್ರಿಭಂಗಿಯಲ್ಲಿ ನಿಂತಿರುವ ಹೆಂಗಸಿನ ಚಿತ್ರ. ಹಿನ್ನಲೆ-ಕೆಂಪು ವರ್ಣ, ಮುಂಭಾಗ-ಕಪ್ಪು. ಇದರಲ್ಲಿ ಹೆಂಗಸಿನ ಸುಂದರ ಮುಖ ಎಲ್ಲರನ್ನೂ ಆಕರ್ಷಿಸಿದ್ದು, ಕೈಯಲ್ಲಿ ಒಂದು ಅಲಂಕಾರಿಕ ಕುಂಭ, ಇದರ ಒಳಗಿನಿಂದ ಹೂಗೊಂಚಲು ಹೊರಹೊಮ್ಮಿರುವ ರೀತಿ ಹಾಗೂ ಹೂವಿನ ಹಿಂಭಾಗದಲ್ಲಿ ಸರ್ಪದ ಹೆಡೆ ನಿಂತಿರುವ ಈ ಚಿತ್ರದ ಗೂಢಾರ್ಥವೇನು ಎಂದು ವಿಸ್ಮಿತರಾದ ಪ್ರೇಕ್ಷಕರು ಚಿಂತನೆಗೊಳಗಾಗುತ್ತಿದ್ದರು.

ಸುಬ್ಬರಾಯರ ಆತ್ಮೀಯ ಮಿತ್ರರಾದ ಇನಾಮತಿಯವರು ಹಾಗೂ ಇತರರು ಆ ಚಿತ್ರದ ವಿಶ್ಲೇಷಣೆಯನ್ನು ಮಾಡಿದಾಗ ಹೇಗೆ ಚಿತ್ರಕೃತಿ ಕಾವ್ಯವಾಗಬಲ್ಲುದು ಎಂಬುದು ತಿಳಿದು ವೀಕ್ಷಕರಿಗೆ ತೃಪ್ತಿಯನ್ನು ತರುತ್ತಿತ್ತು. ಇದರ ವರ್ಣನೆ ಮಹಾತ್ಮಗಾಂಧಿಯವರ ಕೊಲೆಯ ಸಂಚನ್ನು ನಿರೂಪಿಸುವ ಕೃತಿ. ಇದರಲ್ಲಿ ಗೋಡ್ಸೆಯನ್ನು ಸುಂದರ ಹೆಂಗಸಿನ ರೂಪಕ್ಕೆ ಅಳವಡಿಸಿದ್ದಾರೆ. ಗೋಡ್ಸೆ ಮಹಾತ್ಮರನ್ನು ಕೊಲ್ಲುವ ಮುನ್ನ ಕೈಜೋಡಿಸಿ ನಿಂತಿದ್ದನಂತೆ. ಅದರ ಸೂಚಕವಾಗಿ ಹೆಂಗಸಿನ ಭಂಗಿ ಇದೆ. ಅವನು ಕೈಜೋಡಿಸಿ ನಿಂತಿದ್ದ ಭಂಗಿಯ ಹಿಂದೆ ಇದ್ದು ಮಹಾಪಾತಕ ಘೋರ ಕೃತ್ಯದ ಹಿನ್ನೆಲೆಯನ್ನು ಆ ಸುಂದರ ಹೆಂಗಸು ಹಿಡಿದಿರುವ ಅಲಂಕಾರಿಕ ಕುಂಭದಲ್ಲಿನ ಪುಷ್ಪಗುಚ್ಛದ ಹಿನ್ನಲೆಯಲ್ಲಿ ಅಡಗಿರುವ ಸರ್ಪದ ಹೆಡೆ, ಭಯಾನಕ ಮುನ್ಸೂಚನೆಯನ್ನು ನೀಡುತ್ತಿರುವಂತೆ ಭಾಸವಾಗುತ್ತದೆ. ಹಿನ್ನೆಲೆ ಕೆಂಪು, ಭವಿಷ್ಯದ ಕೃತ್ಯವನ್ನು ಸೂರ್ಯಾಸ್ತದ ಸಮಯವನ್ನು ಸೂಚಿಸುತ್ತದೆ. ಮುನ್ನೆಲೆಯಲ್ಲಿ ಕಪ್ಪುವರ್ಣ ರಾಷ್ಟ್ರಪಿತನ ಹತ್ಯೆಯ ಪರಿಣಾಮವನ್ನು ತೋರುತ್ತದೆ. ಈ ವಿವರಣೆಯನ್ನು ಕೇಳಿದ ಪ್ರತಿಯೊಬ್ಬರೂ ತನ್ಮಯವಾಗುತ್ತಿದ್ದರು.

ಈಗ ಅವರ ಸಮಾಜವನ್ನು ಕುರಿತಾದ ಚಿತ್ರಕೃತಿಗಳನ್ನು ಅವಲೋಕಿಸೋಣ. ಒಂದು ಚಿತ್ರ "ಇದಕ್ಕಿಂತ ಬೇಕೆ ಸ್ವರ್ಗ". ಈ ಚಿತ್ರದಲ್ಲಿ ಒಂದು ಹೆಣ್ಣು ಮನೆಯಲ್ಲಿ ಅಡಿಗೆ ಮಾಡುತ್ತಿದ್ದಾಳೆ. ಮುಚ್ಚಂಜೆಯಾಗಿದೆ. ಹಿನ್ನೆಲೆಯಲ್ಲಿ ಎತ್ತುಗಳು ಮೆಲುಕು ಹಾಕುತ್ತಿವೆ. ಪಕ್ಕದಲ್ಲಿ ಧಾನ್ಯ ತುಂಬಿರುವ ವಾಡೆಗಳು, ಒಂದರ ಮೇಲೊಂದು ಕೂತಿವೆ.

ಗೃಹಿಣಿಗೆ ಹತ್ತಿರದಲ್ಲಿ ನೆಲದ ಮೇಲೆ ಕೂಸೊಂದು ನಲಿಯುತ್ತಾ ಮಲಗಿದೆ. ಮನೆ ರಂಗವಲ್ಲಿ ತೋರಣಗಳಿಂದ ಅಲಂಕೃತವಾಗಿದೆ. ಒಂದು ಗೋಡೆಯ ಮೇಲೆ ದೇವರ ಪಟ ರಾರಾಜಿಸುತ್ತಿದೆ. ಬಾಗಿಲಿನಿಂದ ಒಳಕ್ಕೆ ಗಂಡ ಹುಲ್ಲಿನ ಹೊರೆ ಹೊತ್ತು ತರುತ್ತಿದ್ದಾನೆ. ಈ ಮನೆ ಸಮೃದ್ಧಿಯ ನೆಲೆ, ನೆಮ್ಮದಿ ಇದೆ. ಧಾನ್ಯ ಇದೆ. ವ್ಯವಸಾಯ ಮಾಡಲು ದಷ್ಟಪುಷ್ಟವಾದ ಎತ್ತು ಇವೆ. ದೃಢಕಾಯನಾದ ಗಂಡ ಬರುತ್ತಿದ್ದಾನೆ. ಬಾಳಿನ ಸುಳಿ ಮಗು ಪಕ್ಕದಲ್ಲಿ ನಲಿಯುತ್ತಿದ್ದಾನೆ? "ಇದಕ್ಕಿಂತ ಬೇಕೆ ಸ್ವರ್ಗ". "ಬಾಲ್ಯದ ಸೊಗಸು" ಮತ್ತೊಂದು ಹಳ್ಳಿಯ ಚಿತ್ರ. ಒಂದು ಎತ್ತಿನಗಾಡಿಯ ಮೇಲೆ ಅರೆ ಬಟ್ಟೆಗಳಿಂದ ಕುಳಿತಿರುವ ಬಾಲಕ ಕೈಯಲ್ಲಿನ ಜೋಳದ ಹಸಿಕಡ್ಡಿಗಳನ್ನು ಗಾಡಿಯ ಮುಂದೆ ಮಲಗಿರುವ ಎತ್ತುಗಳಿಗೆ ತಿನ್ನಿಸುತ್ತಿದ್ದಾನೆ. ಮೈತುಂಬಿರುವ ಎತ್ತುಗಳು ಬಾಲಕನ ಪ್ರೀತಿಗೆ ಓಗೊಟ್ಟು ದಂಟನ್ನು ಬಾಯಿಗೆ ಸೇರಿಸುತ್ತಿವೆ. ಸುತ್ತಲು ನಿಸರ್ಗದ ರಮ್ಯ ಚಿತ್ರಣ. ಹೀಗೆ ಇನ್ನೂ ಅನೇಕ ಚಿತ್ರಗಳಲ್ಲಿ ಅವರ ಕಲ್ಪನಾವಿಲಾಸ ಹೊರಹೊಮ್ಮಿದೆ.

ಮತ್ತೊಂದು ಚಿತ್ರ "ನುಡಿಮುಡಿ", ಈ ಚಿತ್ರದಲ್ಲಿ ಗ್ರಾಮಗಳಲ್ಲಿ ಸುಗ್ಗಿಯಾದ ಮೇಲೆ ಗ್ರಾಮದೇವತೆ ಜಾತ್ರೆ ಆಚರಿಸುವುದು ಕರ್ತವ್ಯ. ವಸಂತಕಾಲದ ಹಿನ್ನೆಲೆಯಲ್ಲಿ ರಾತ್ರಿ ಸಮಯ ಹಳ್ಳಿಯ ಹೆಂಗಳೆಯರು ಮೈತೊಳೆದುಕೊಂಡು ಮಡಿಯಿಂದ ತಮ್ಮ ನೆಚ್ಚಿನ ಸೀರೆಗಳೊಂದಿಗೆ, ಆಭರಣಗಳನ್ನು ಧರಿಸಿಕೊಂಡು, ಲಕ್ಷಣವಾಗಿ ಹಣೆಗೆ ಕುಂಕುಮವನ್ನಿಟ್ಟುಕೊಂಡು ಕೆಲವರು ಕೈಯಲ್ಲಿ ಆರತಿ ತಟ್ಟೆಗಳನ್ನು ಹಿಡಿದಿದ್ದಾರೆ. ಮತ್ತೆ ಕೆಲವರು ಹರಕೆ ಸಲುವಾಗಿ ತಲೆಯ ಮೇಲೆ ಆರತಿ ಇಟ್ಟುಕೊಂಡಿದ್ದಾರೆ. ಹಳ್ಳಿ ಹೆಂಗಳೆಯರಾದರೂ ತಮ್ಮ ಒನಪು ವಯ್ಯಾರಗಳಿಂದ ವಿವಿಧ ಭಂಗಿಗಳಿಂದ ಗ್ರಾಮದೇವತೆಯ ಗುಡಿಗೆ ಬರುತ್ತಿದ್ದಾರೆ. ಅವರ ಕಾಲಂದಿಗೆಗಳು ಕಾಣುತ್ತಿವೆ. ಆರತಿಗಳಲ್ಲಿ ದೀಪಗಳು ವಿವಿಧ ವರ್ಣಗಳ ಪುಷ್ಪಗಳು ರಾರಾಜಿಸುತ್ತಿವೆ. ಹಳ್ಳಿಯ ಪದ್ಧತಿಗನುಗುಣವಾಗಿ ಒಬ್ಬ ಅಗಸನ ಸೀರೆಗಳನ್ನು ನೆಲದ ಮೇಲೆ ಹಾಸುತ್ತಿದ್ದಾನೆ. ಮತ್ತೊಬ್ಬನು ಹಿಂದೆ ಸೀರೆಗಳನ್ನು ನೆಲದ ಮೇಲಿನಿಂದ

ತೆಗೆಯುತ್ತಿದ್ದಾನೆ. ಈ ಸುಂದರವಾದ ಚಿತ್ರಣ ಕಾವ್ಯರೂಪದಲ್ಲಿ ಅಳವಡಿಸಿ ಮನಸ್ಸಿಗೆ ಹರ್ಷವನ್ನು ಉಂಟುಮಾಡುವ ಸುಂದರ ಸನ್ನಿವೇಶವನ್ನು ಸೃಷ್ಟಿಮಾಡಿದ್ದಾರೆ. ಸುಬ್ಬರಾಯರ ವರ್ಣ ಕೌಶಲ್ಯವಂತೂ ಗ್ರಾಮೀಣ ಜಾತ್ರೆಯ ಪರಿಸರದ ಮೋಜನ್ನು ವಿಜೃಂಭಿಸುತ್ತದೆ.

1962ರಲ್ಲಿ ಹೆಲ್ಸಿಂಕಿಯಲ್ಲಿ ನಡೆದ ಭಾರತ ಸಾಂಸ್ಕೃತಿಕ ಉತ್ಸವದಲ್ಲಿ ಪಿ. ಸುಬ್ಬರಾಯರು "ಗೋರಿ" ಎಂಬ ಕೃತಿಗೆ ಬಹುಮಾನ ಸ್ಥಳೀಯ ಪತ್ರಿಕೆಗಳು ಆ ಚಿತ್ರಕ್ಕೆ ಹೆಚ್ಚಿನ ಪ್ರಚಾರ ನೀಡಿದ್ದವು. ಅದು ಸುಬ್ಬರಾಯರ ಕಲಾ ಪ್ರೌಢಿಮೆಗೆ ಸಂದ ಗೌರವವಾಗಿದೆ. ಇವರು ಬುದ್ಧನ ಜೀವನ ಚರಿತ್ರೆಯ ಮೇಲೆ ಅನೇಕ ಚಿತ್ರಗಳನ್ನು ರಚಿಸಿದರು. ಅದರಲ್ಲಿ ಸುಬ್ಬರಾಯರ "ಅಂಗುಲಿ ಮಾಲ" ಎಂಬ ಕೃತಿ 1958 ರಿಂದ 64ರ ವರೆಗೆ ಇವರ ಶೈಲಿಯನ್ನು ಪ್ರತಿಬಿಂಬಿಸುವ ಉತ್ತಮ ಕೃತಿಯಾಗಿದೆ. ಸಂಯೋಜನಾ ಚಿತ್ರಗಳ ಯಾದಿಯಲ್ಲಿ ಇವರ ಕೃತಿಗಳು-ತಮ್ಮದೇ ಆದ ವೈವಿಧ್ಯಮಯ ರಚನಾತ್ಮಕ ಕೊಡುಗೆ ನೀಡಿವೆ. ಇವು ಮುಂದಿನ ತಲೆಮಾರಿಗೆ ಒಂದು ಕೊಡುಗೆಯಾಗಿದೆ. ಕಲಾ ಶಿಕ್ಷಣದಲ್ಲಿ ಸಂಯೋಜನಾ ಚಿತ್ರಗಳ ವಿವರಣೆಗಳನ್ನು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿ ಉದಾಹರಣೆಗಳನ್ನು ಕೊಡುವಾಗ, ಸುಬ್ಬರಾಯರ ಚಿತ್ರಗಳು ಉತ್ತಮ ನಿದರ್ಶನವಾಗಬಲ್ಲವು. ಒಂದು ದಶಕದಿಂದ ಇನ್ನೊಂದು ದಶಕಕ್ಕೆ ತಮ್ಮ ಬದಲಾವಣೆಯ ವೈವಿಧ್ಯತೆಯಿಂದ ಕಲಾವಿದ ತಾನು ಸಮಾಜಕ್ಕೆ ಏನು ಕೊಡುಗೆಯನ್ನು ಕೊಡಬಲ್ಲನೆಂಬುದಕ್ಕೆ ಇವರ ಕೃತಿಗಳು ಉತ್ತಮ ನಿದರ್ಶನವಾಗಿದೆ. ಭಾವಚಿತ್ರ ಕೃತಿಗಳ ಅವಲೋಕನ ಮಾಡಿದಾಗ ಇವರ 'ಪಂಡಿತ ನೆಹರೂ' ಅವರ ಕೃತಿ ಛಾಯಾಚಿತ್ರದ ನಕಲಾಗಿರದೆ, ನೆಹರೂರವರ ವರ್ಣಮಯ ಬದುಕಿನ ಪ್ರತಿಬಿಂಬವಾಗಿದೆ. ಮುಖದ ಮೇಲಿನ ರೇಖೆಗಳು ಚಿತ್ರದ ಸೊಬಗನ್ನು ಹೆಚ್ಚಿಸಿವೆ. ವರ್ಣಸಂಯೋಜನೆ ನೆಹರೂರವರ ಜೀವನದ ಸೊಬಗನ್ನು ಬಿಂಬಿಸುವ ಕೃತಿಯಾಗಿದೆ.

# ಕೆಲವು ಕೃತಿಗಳ ಪರಿಚಯ

## ನಾಗಾಲೋಟ

ನಾಗಾಲೋಟ ಈ ಚಿತ್ರದಲ್ಲಿ ನಿಸರ್ಗದ ಮಧ್ಯೆ ಹಳ್ಳಿಯ ರೈತ ತನ್ನ ಬಲಶಾಲಿ ಎತ್ತುಗಳನ್ನು ಕಟ್ಟಿದ ತೇರು ಬಂಡಿಯ ಮೇಲೆ ನಿಂತು ಪಂದ್ಯದ ಓಟಕ್ಕೆ ಎಂಬಂತೆ ಓಡಿಸುತ್ತಿರುವ ದೃಶ್ಯ. ಹಿನ್ನೆಲೆ ಮಸುಕಾಗಿರುವ ಹಸಿರು ಹಸಿರಿ ತುಂಬಿದೆ. ಚಿತ್ರದ ಮುಂಭಾಗದಲ್ಲಿ ಬೆಳೆದು ನಿಂತಿರುವ ಮರದ ಕಾಂಡಗಳು ನಿಂತಿವೆ. ಶ್ವೇತವರ್ಣದಿಂದ ಹಿನ್ನೆಲೆಗೆ ಹೊಂದಿಕೊಂಡಂತೆ ಸರಳವಾದ ವಿನ್ಯಾಸದಿಂದ ರಾರಾಜಿಸುತ್ತಿರುವ ಬಂಡಿ ಪರಿಸರದ ಮಧ್ಯೆ ಜೀವನದ ಓಟದ ವೇಗವನ್ನು ಬಿಂಬಿಸುವ ಸುಂದರ ಕೃತಿಯಾಗಿದೆ.

## ಗೆಜ್ಜೆಪೂಜೆ

ಮೂವರು ಹೆಣ್ಣುಮಕ್ಕಳು-ನೃತ್ಯಗಾತಿಯರು ಕಾಲಿಗೆ ಗೆಜ್ಜೆಕಟ್ಟುವ ಸಂಭ್ರಮ, ಒಬ್ಬಳು ತನ್ನ ಸೌಂದರ್ಯವನ್ನು ತನ್ನ ಅಂಗೈ ಮುಕುರದಿಂದ ನೋಡಿ ಆನಂದಿಸುತ್ತಿದ್ದಾಳೆ. ಮತ್ತೊಬ್ಬಳು ನೃತ್ಯಭಂಗಿಯಲ್ಲಿ ತಲ್ಲೀನಳಾಗಿದ್ದಾಳೆ. ಮೂರನೆಯವಳು ತನ್ನ ಕಾಲಿಗೆ ಗೆಜ್ಜೆಯನ್ನು ಕಟ್ಟುವ ಹವಣಿಕೆಯಲ್ಲಿದ್ದಾಳೆ. ಸಂಗೀತವನ್ನು ಬಿಂಬಿಸುವ ಪರದೆಯಿಂದ ಹಿನ್ನೆಲೆ ಆವೃತವಾಗಿದೆ.

## ನಿಸರ್ಗದ ಪುತ್ರರು ಹಾಗೂ ಪುತ್ರಿಯರು

ಈ ಚಿತ್ರಕೃತಿ ನಾಲ್ಕು ಭಾಗಗಳಿಂದ ಕೂಡಿದ್ದು, ಮೊದಲ ಮತ್ತು ಕೊನೆ ಭಾಗಗಳಲ್ಲಿ ಗಂಡು ಮಕ್ಕಳು ಕುಳಿತಿರುವ ಭಂಗಿಯನ್ನು ಬೇರೆ ಬೇರೆಯಾಗಿ ವಿನ್ಯಾಸಗೊಳಿಸಿದ್ದಾರೆ. ಮಧ್ಯೆ ಇರುವ ಎರಡು ಭಾಗಗಳಲ್ಲಿ ಹೆಣ್ಣುಮಕ್ಕಳು ಜಿಂಕೆಯೊಂದಿಗೆ ಸಲಿಗೆಯಿಂದ ಆಡುತ್ತಿರುವುದನ್ನು ಸೃಜಿಸಿದ್ದಾರೆ. ಇದು ಬಹುಶಃ ಯಾವುದೋ ಗೋಡೆಯ ಮೇಲೆ ರಚಿಸಬಹುದಾದ ಭಿತ್ತಿಚಿತ್ರವಾಗಿರಬಹುದು.

## ಮಮತೆ

ಮಕ್ಕಳ ಮೇಲೆ ತಾಯಿಗೆ ಅಪಾರ ಮಮತೆ. ಸಣ್ಣ ಮಕ್ಕಳಾದರಂತೂ ಅತಿ ಹೆಚ್ಚಿನ ಮಮತೆ. ಈ ಚಿತ್ರದ ರೇಖಾ ವಿನ್ಯಾಸ ಮಮತೆಯ ಸುಳಿಯಂತೆ ತಾಯಿ ಮಗುವನ್ನು ಆವರಿಸಿದೆ. ಮಗು ಶಾಲೆಗೆ ಹೋಗಲು ಸಿದ್ಧವಾಗಿದೆ. ತಾಯಿ ಮಗುವನ್ನು ಸಿದ್ಧಪಡಿಸಿ ಪುಸ್ತಕಗಳ ಚೀಲದೊಂದಿಗೆ ಶಾಲೆಗೆ ಮಗುವನ್ನು ಕಳುಹಿಸಿದಷ್ಟು ಕಾಲ ಹೇಗೆ ಕಾಲ ಕಳೆಯಬೇಕೆಂಬ ಚಿಂತೆಯಿಂದ ಬಾಚಿ ತಬ್ಬಿದ್ದಾಳೆ ಮಗುವನ್ನು. ಇದು ಅಂತಃಕರಣದ ಪ್ರತಿಬಿಂಬವೆನಿಸುವ ರೇಖಾ ಚಿತ್ರವಾಗಿದೆ.

ವಿದ್ಯಾರ್ಥಿದೆಶೆಯಲ್ಲಿ ರಚಿಸಿದ ಕೃತಿಗಳು ಮೈಸೂರು ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಶಾಲೆಯನ್ನು ಪ್ರತಿನಿಧಿಸುತ್ತವೆ. ಈ ಹೊತ್ತಿಗೆಯಲ್ಲಿ ಸೇರಿಸಿರುವ ಇವರ ಸ್ತಬ್ಧಚಿತ್ರ "Still Life" ಅವರ ಆಕಾಡೆಮಿಕ್ ಶೈಲಿಯ ಕೃತಿಗೆ ಅತ್ಯುತ್ತಮ ನಿದರ್ಶನವಾಗಿದೆ.

ಒಟ್ಟಿನಲ್ಲಿ ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯ ನಂತರದ ಕಲಾ ಬೆಳವಣಿಗೆಯ ಮುಂಚೂಣಿಯಲ್ಲಿದ್ದ ಸುಬ್ಬರಾಯರು ಬಂಗಾಳಿ ಶೈಲಿಯ ನವ್ಯರೂಪದ ಪ್ರತಿಪಾದಕರೆನ್ನಬಹುದು. ಇವರ ಚಿತ್ರಗಳಲ್ಲಿ ನಿಯೋ ಇಂಪ್ರೆಷನ್ ಶೈಲಿಯ ಉತ್ತಮ ಉದಾಹರಣೆಗಳನ್ನು ಕಾಣಬಹುದಾಗಿದೆ. ತಾಂತ್ರಿಕ ಸಿದ್ಧಿ ಪಡೆದಿದ್ದ ಈ ಕಲಾವಿದರಿಗೆ ಉತ್ತಮ ಸಲಕರಣೆಗಳು ಸಿಗದಿದ್ದು ದುರ್ದೈವ. ಬಹುಶಃ ಇವರಿಗೆ ತಮ್ಮ ಕಲಾ ಅಭಿವ್ಯಕ್ತಿಯನ್ನು ಪ್ರಭಾವಶಾಲಿಯಾಗಿ ಹೊರ ಚಿಮ್ಮಿಸುವ ಸ್ವಾತಂತ್ರ್ಯ, ಪರಿಸರ ಹಾಗೂ ಅನುಕೂಲಗಳು ದೊರಕದಿದ್ದುದು ಒಂದು ದುರಂತವೆನ್ನಬಹುದು.

ಸುಬ್ಬರಾಯರು ಕರ್ನಾಟಕದ ಅತ್ಯುತ್ತಮ ನವೋದಯ ಕಲಾವಿದರ ಸಾಲಿಗೆ ಪ್ರಥಮರೆಂದು ಪರಿಗಣಿಸಲು ಯಾವ ಅಡ್ಡಿಯೂ ಇಲ್ಲ.

# ಅನುಬಂಧ

**ದಿನಾಂಕ : 18-1-1971ರಂದು ಕನ್ನಡಪ್ರಭಪತ್ರಿಕೆ**
**ಪಿ. ಸುಬ್ಬರಾಯರಿಗೆ ಅರ್ಪಿಸಿದ ಶ್ರದ್ಧಾಂಜಲಿ**

## ಕಣ್ಮರೆಯಾದ ಕಲಾವಿದನಿಗೆ ಶ್ರದ್ಧಾಂಜಲಿ

ಅಸಹಾಯಕತೆ, ನೈರಾಶ್ಯ, ಮೌನ ಮತ್ತು ಕಂಬನಿಗಳೇ ದಾರಿದ್ರ್ಯದ ದ್ರವ್ಯಗಳು. ಬೆನ್ನು ಹತ್ತುವ ದಾರಿದ್ರ್ಯದ ಬೆನ್ನು ಹಿಡಿದು ಬರುವ ಬವಣೆಗಳೂ ಬಹಳ, ಒಳಗಾದವರ ಕರುಳು ಸುಡುವ "ದಾರಿದ್ರ್ಯ" ನೋಡುವವರ ಕರುಳನ್ನು ಹಿಂಡದೇ ಬಿಡದು.

ಸೃಷ್ಟಿಶೀಲ ಕಲಾವಿದ ದಿವಂಗತ ಪುಟ್ಟನರಸಪ್ಪ ಸುಬ್ಬರಾವ್, ಕಲೆಯ ರಂಗದಲ್ಲಿ ಖ್ಯಾತಿವೆತ್ತರೂ, ವಿಧಿವಂಚಿತರಾಗಿ ಉಳಿದವರು. ಸಾವು ನೋವುಂಡ ಬೆಳೆದವರು.

ಆದ್ದರಿಂದಲೇ ಅವರ ಸುಂದರ ಜಲವರ್ಣ ಕೃತಿಗಳಲ್ಲಿ ಒಂದಾದ "ದಾರಿದ್ರ್ಯ" ಸಜೀವವಾಗಿದೆ. ವಸ್ತುವಿನ ತೀಕ್ಷ್ಣತೆಯನ್ನು ಚಿತ್ರದ ಆಳ ಸ್ಪಷ್ಟಪಡಿಸಿ, ಆಳವಾದ ಪ್ರಭಾವ ಮೂಡಿಸುತ್ತದೆ.

ಎಳೆತನದಲ್ಲಿ ಕಲಾಮಂದಿರದಲ್ಲಿ ಕಲಿತು, ಅನಂತರ ಮೈಸೂರು ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಶಾಲೆಯಲ್ಲಿ ತರಬೇತಿ ಪಡೆದು, ಕುಂಚ ಹಿಡಿದ ದಿವಂಗತ ಪಿ. ಎಸ್. ರಾಯರು ಪರಂಪರಿಯ ಅಂಧಪಾಲಕರೂ ಆಗಿ ಉಳಿಯಲಿಲ್ಲ. ಹೊಸತೆಂದು ಹಾತೊರೆದು ಅನುಕರಣೆಗೂ ಕೈ ಇಡಲಿಲ್ಲ. ತಮ್ಮದೇ ಆದ ಹಾದಿ ಕಂಡುಕೊಂಡು ಎತ್ತರಕ್ಕೇರಿದರು.

ಗ್ರಾಮ್ಯಜೀವನ, ಅದರಲ್ಲಿಯೂ ವಿಶೇಷವಾಗಿ ಸ್ತ್ರೀಯರ ಒಲುಮೆ, ಗೆಲುಮೆ, ಕಂಬನಿ, ಕಳವಳ, ನಿರಾಶೆಗಳನ್ನು ಒಳಗೊಂಡ

ವಸ್ತುಗಳನ್ನು ಪ್ರಧಾನವಾಗಿ ಚಿತ್ರಿಸಿದ ದಿವಂಗತ ಪಿ.ಎಸ್. ರಾಯರ ವೈವಿಧ್ಯಪೂರ್ಣ ವಸ್ತುಚಿತ್ರಣ "ಕಲಾವಿದನಳಿದರೂ ಕಲೆಯನ್ನು ಜೀವಂತಗೊಳಿಸುತ್ತದೆ". ಸರಳ ಸುಂದರ ಕಲಿಕೆಗಳಂತೆ ಕಣ್ಣು ಕಟ್ಟುವ ಅವರ ಚಿತ್ರಗಳಲ್ಲಿ ನಲಿವಿಗಿಂತ ನೋವಿಗೆ ಆದ್ಯತೆ ಹೆಚ್ಚು ಎನಿಸದಿರದು. ಬೆಂಗಳೂರು, ಧಾರವಾಡ, ಮುಂಬೈ, ದೆಹಲಿಗಳಲ್ಲಿ ತಮ್ಮ ಜೀವನ ಸವೆಸಿದ ದಿವಂಗತ ರಾಯರು 1967ರಲ್ಲಿ ಸಾವನ್ನಪ್ಪುವ ಮೊದಲು ದೆಹಲಿಯ ಕಲಾಶಾಲೆಯೊಂದರ ಆಚಾರ್ಯರಾಗಿದ್ದರು.

"ಗಾನ ಮುಗಿದರೂ ಹಂಗು ಉಳಿಯವಂತೆ" ವಿಧಿವಶರಾದ ಕಲಾವಿದರು ಹಂಗು ರಚಿಸಿದ ಕೃತಿಗಳನ್ನು ಏರ್ಪಡಿಸಿರುವ ಚಿತ್ರಪ್ರದರ್ಶನ ಕಾಲವಶರಾದ ಕಲಾವಿದರಿಗೆ "ಶ್ರದ್ಧಾಂಜಲಿ" ಯಂತಿದೆ.

ಪಿ.ಎಸ್. ರಾಯರು ಕಳೆದ 15ವರ್ಷಗಳ ಅವಧಿಯಲ್ಲಿ ರಚಿಸಿದ ಸುಮಾರು 200ಕ್ಕೂ ಹೆಚ್ಚು ಪೈಕಿ 94 ಚಿತ್ರಗಳನ್ನು (17 ತೈಲಚಿತ್ರಗಳು, 77 ಜಲವರ್ಣಚಿತ್ರಗಳು) ಆರಿಸಿ, ವಿಶ್ವೇಶ್ವರಯ್ಯ ಟ್ರೇಡ್ಸ್ ಸೆಂಟರಿನಲ್ಲಿ ನಾಳೆಯಿಂದ ಒಂದು ವಾರ ಕಾಲ ಪ್ರದರ್ಶನಕ್ಕಿಡಲಾಗಿದೆ. ದಿವಂಗತ ಕಲಾವಿದರ ಒಂದೆರೆಡು ಅರೆವಾಸಿ ಚಿತ್ರಗಳನ್ನು ಒಳಗೊಂಡಿರುವ ಪ್ರದರ್ಶನವನ್ನು ರಾಜ್ಯದ ಲಲಿತಕಲಾ ಅಕಾಡೆಮಿ ಮತ್ತು ಚಿತ್ರಕಲಾ ಪರಿಷತ್ತುಗಳು ಒಂದುಗೂಡಿ ಏರ್ಪಡಿಸಿವೆ.

ನಾಳೆಯಿಂದ 24ರ ವರೆಗೆ ಮಧ್ಯಾಹ್ನ 3 ರಿಂದ ಸಂಜೆ 7-30ರ ವರೆಗೆ ತೆರೆದಿರುವ ಪ್ರದರ್ಶನಕ್ಕೆ ಪ್ರವೇಶ ಉಚಿತ.

ಸಾಲಂಕೃತ ಸುಮಂಗಲಿಯ "ಪ್ರತೀಕ್ಷೆ"ಯನ್ನು ಬಿಂಬಿಸುವ ಚಿತ್ರ. ಮಂಗಳ ಕಳಶವನ್ನೆತ್ತಿ ಹೊರಟ ಕನ್ಯೆಯ "ಹರಕೆ" ಮಧುಚಂದ್ರ ದರ್ಶನದಲ್ಲಿ "ಓ!, ಆ ರಾತ್ರಿ," "ಮಥನ" ಚಿತ್ರಗಳಲ್ಲಿ ಜೀವನದ ಸುಂದರತೆ ಅಭಿವ್ಯಕ್ತವಾಗಿವೆ. ಹಿತ, ಮಿತ ವರ್ಣವಿನ್ಯಾಸ ಮನವನ್ನು ಹಸಿರುಗೊಳಿಸುತ್ತದೆ. ಅಂಧಾನುಕರಣೆಯನ್ನು ಎಂದೂ ಒಪ್ಪದಿದ್ದ ಕುಂಚದಿಂದ ಮೂಡಿಬಂದ "ಕಲೆಯ ಕೊಲೆಯಲ್ಲಿ" ಸೃಜನಶೀಲ

